# ಅಂತರ-ಲಿಂಗೀಯ ಸಮುದಾಯದವರ ಮಾನವ ಹಕ್ಕುಗಳ ಉಲ್ಲಂಘನೆ

ಕೋಥಿ ಮತ್ತು ಹಿಜ್ರಾ
ಲೈಂಗಿಕ ಕಾರ್ಮಿಕರನ್ನು
ಕುರಿತ ಒಂದು ಅಧ್ಯಯನ




ವರದಿ ಸಿದ್ಧಪಡಿಸಿದವರು

ಪಿ.ಯು.ಸಿ.ಎಲ್.-ಕರ್ನಾಟಕ

# ಅಂತರ-ಲಿಂಗೀಯ ಸಮುದಾಯದವರ ಮಾನವ ಹಕ್ಕುಗಳ ಉಲ್ಲಂಘನೆ

ಕೋಥಿ ಮತ್ತು ಹಿಜ್ರಾ ಲೈಂಗಿಕ ಕಾರ್ಮಿಕರನ್ನು ಕುರಿತ ಒಂದು ಅಧ್ಯಯನ

ಡಿಸೆಂಬರ್ -2005

ವರದಿ ಸಿದ್ಧಪಡಿಸಿದವರು
ಪಿ.ಯು.ಸಿ.ಎಲ್.-ಕರ್ನಾಟಕ

# ಪ್ರಕಟಣೆಯ ವಿವರ


| | | |
|---|---|---|
| ಮೊದಲ ಮುದ್ರಣ | : | 1000 ಪ್ರತಿಗಳು |
| ಬೆಂಬಲ ಬೆಲೆ | : | 50 ರೂಪಾಯಿಗಳು |
| ಪ್ರಕಾಶಕರು | : | ಪಿ ಯು ಸಿ ಎಲ್ - ಕರ್ನಾಟಕ |
| ಅನುವಾದ | : | ಉಷಾ ಬಿ.ಎನ್, ದು. ಸರಸ್ವತಿ, ಸುಮತಿ |
| ಮುಖಪುಟ | : | |
| ವಿನ್ಯಾಸ ಹಾಗು ಡಿ.ಟಿ.ಪಿ | : | ಪಿ. ಸುರೇಶ್ |
| ಮುದ್ರಣ | : | ಕ್ರಿಯಾ ಪ್ರಕಾಶನ ಪ್ರೈ.ಲಿ. #12, 18ನೇ ಅಡ್ಡರಸ್ತೆ, ಎಸ್.ಆರ್.ನಗರ, ಬೆಂಗಳೂರು. ದೂರವಾಣಿ: 22234369 |

# ಪರಿವಿಡಿ

# ಅರ್ಪಣೆ

ಅಮ್ಮ ಎಂಬೊ ಹೆಮ್ಮೆ ಕೊಟ್ಟೆ ನನಗೆ
ಅಮ್ಮನಾಗೆಂದು ನನ್ನೆದುರು ನಿಂತಾಗ
ನಿನಗೆ ವಯಸ್ಸು ಹದಿನೆಂಟು
ನನ್ನ ಕಣ್ಣಿಗೆ ನೀನು ಹಸುಗೂಸು
ಕೈಯಾರೆ ನಿನ್ನ ಮೆದಡವಿ
ಹರಿಶಿನ ಹಚ್ಚಿ, ನೀರೆರೆದು
ಮೈ ಒರೆಸಿದ್ದು ನಾ ಮರೆಯಲಾರೆ
ನೀನೆಂದೆ
ನನ್ನಂತಹ *ಗುರು ಸಿಗುವುದೊಂದು ಭಾಗ್ಯ
ನನಗೆ ಸಿಕ್ಕ ಭಾಗ್ಯ ?
ಆತ್ಮ ಸಮ್ಮಾನದ ಹಾದಿಗೆ
ಕೈಹಿಡಿದು ಕರೆತಂದ ನೀ ಎನ್ನ ಗುರು
ಪ್ರೀತಿಗೊಂದು ಉದಾಹರಣೆ ಯಂತಿದ್ದೆ
ಹಾಗೆ ಇದ್ದೀಯ ಈಗಲೂ ಎಲ್ಲೆರೆದೆಯೊಳಗೆ
ಈ ಲೋಕ ಕಲಿಸಿದ್ದು ಹಿಡಿಮಣ್ಣು
ನಿನ್ನಿಂದ ಕಲಿತಿದ್ದು ಲೆಕ್ಕವಿಲ್ಲ
ಅಮ್ಮ ಮೂಲಂಗಿಚಟ್ನಿ ಮಾಡೋದು
ಹೇಗೆಂದು ಫೋನ್ ಮಾಡಿ
ನನ್ನ ಗೋಳಿಗೆ ಕಿವಿಯಾಗುತ್ತಿದ್ದೆ
ನನ್ನ ಕಿವಿಗಪ್ಪಳಿಸಿದ್ದು
ನಿನ್ನ ಸಾವಿನ ಸುದ್ದಿ
ನನ್ನ ಸಾವಿಗೆ ಮಣ್ಣು ಹಾಕಬೇಕಾದವಳಿಗೆ
ನಾನೇ ಮಣ್ಣು ಹಾಕಿದೆ
ಫಮಿಲಾ, ನಿನಗೆ ಗೊತ್ತಾ ?
ನೀ ಹೋದಾಗಿನಿಂದ
ಪ್ರೀತಿಗೆ ಹಾತೊರೆವ ಒಂಟಿ
ಮರವಾಗಿ ನಿಂತಿರುವೆ
ಗಾಳಿಯಾಗಿ ಬಂದು
ಮೈ ದಡುವುತ್ತೀಯಾ

ನಿನ್ನ ಅಮ್ಮ
**– ರೇವತಿ**
ಹಿಜ್ರಾ ಸಾಮಾಜಿಕ ಕಾರ್ಯಕರ್ತೆ

* ಹಿಜ್ರಾ ಸಮುದಾಯಕ್ಕೆ ಸೇರುವವರು ಆ ಸಮುದಾಯದ ಒಬ್ಬರನ್ನು ಗುರುವಾಗಿ ಸೂಕ್ತ ಆಚರಣೆಗಳ ಮೂಲಕ ಒಪ್ಪಿಕೊಳ್ಳುತ್ತಾರೆ. ಆ ಸಮುದಾಯದಲ್ಲಿ ಗುರು ತಾಯಿಯಂತೆ. ಮಗಳನ್ನು ಚೇಲಾ ಎಂದು ಕರೆಯುತ್ತಾರೆ.



ಹಿಜ್ರಾ ಸಾಮಾಜಿಕ ಕಾರ್ಯಕರ್ತೆ
ಫಮಿಲಾಳ ನೆನಪಿಗೆ

* * * * * *

# ಪ್ರಸ್ತಾವನೆ

ಅಂತರ ಲಿಂಗೀಯ ಸಮುದಾಯದ ಮೇಲಿನ ಮಾನವ ಹಕ್ಕುಗಳ ಉಲ್ಲಂಘನೆ ಕುರಿತ ಪಿ.ಯು.ಸಿ.ಎಲ್. ಕರ್ನಾಟಕದವರ ಪ್ರಥಮ ಮುದ್ರಣವು ಪ್ರಕಟವಾಗಿದ್ದು ಸೆಪ್ಟಂಬರ್ 2003ರಲ್ಲಿ. ಬಿಡುಗಡೆಯಾದಾಗನಿಂದಲೂ ಎಷ್ಟೊಂದು ವ್ಯಾಪಕವಾಗಿ ಪ್ರಸರಣಗೊಂಡಿದೆ ಎಂದರೆ ಹಂಚಲು ಪ್ರತಿಗಳಿಲ್ಲದಂತಾಗಿದೆ. ಮತ್ತೊಮ್ಮೆ ಪ್ರಕಟಿಸಬೇಕೆ ಎಂಬ ಪ್ರಶ್ನೆ ನಮ್ಮನ್ನು ಕಾಡಿದೆ. ಎಡಬಿಡದ ಐತಿಹಾಸಿಕ ಘಟನೆಗಳಿಂದಾಗಿ ಹಿಜ್ರಾ ಮತ್ತು ಕೋಥಿಗಳ ಸಂದರ್ಭ ಹಾಗೂ ಪರಿಸ್ಥಿತಿ ನಾಟಕೀಯವಾಗಿ ಬದಲಾಗಿ ಹೋಗಿ, ವರದಿಯು ಪ್ರಸ್ತುತೆಯನ್ನೆ ಕಳೆದುಕೊಂಡಿದೆಯೋ ಅಥವಾ ದಾಖಲಿಸಿರುವ ಘಟನೆಗಳು 2003ರದಾದರೂ ಇಂದಿಗೂ ಪ್ರಸ್ತತತೆ ಮತ್ತು ಪ್ರಾಮುಖ್ಯತೆಯನ್ನು ಕಳೆದುಕೊಂಡಿಲ್ಲವೊ ಎಂಬುದನ್ನು ಇತ್ಯರ್ಥ ಮಾಡಿಕೊಳ್ಳಬೇಕಾಗಿತ್ತು.

ವರದಿ ಕುರಿತು ನಮಗೆ ಸಿಕ್ಕ ಪ್ರತಿಕ್ರಿಯೆಗಳಿಂದ, ವರದಿ ಈಗಲೂ ಪ್ರಸ್ತುತವಾಗಿದ್ದು ಬೆಂಗಳೂರಷ್ಟೇ ಅಲ್ಲದೆ ದೇಶದ ಇತರೆ ಭಾಗಗಳಲ್ಲಿರುವ ಹಿಜ್ರಾಗಳು ಮತ್ತು ಕೋಥಿಗಳ ಮತ್ತು ಜಗತ್ತಿನಾದ್ಯಂತ ಅಂತರ ಲಿಂಗೀಯ ಜನರ ಅನುಭವಕ್ಕೆ ಹತ್ತಿರವಾಗಿದೆ ಎಂದು ತಿಳಿಯಿತು. ಕಳೆದೆರಡು ವರ್ಷಗಳಲ್ಲಿ ಕೆಲವು ಬದಲಾವಣೆ ಆಗಿವೆ. ಅದನ್ನಿಲ್ಲಿ ಸಂಕ್ಷಿಪ್ತವಾಗಿ ಹೇಳಿದ್ದೇವೆ. ಆದರೆ ಪರಲಿಂಗೀಯ ಸಮಾಜದ ಮೂಲಭೂತ ರಚನೆಗಳು ಹಾಗೆ ಉಳಿದಿವೆ. ಕ್ವಿಯರ್ ಜನರನ್ನು ಕುರಿತು ಅರಿವು ಮೂಡಿಸುತ್ತಿರುವ ಗುಂಪುಗಳು ವರದಿಯನ್ನು ಆಂದೋಲನದ ಮತ್ತು ಶೆಕ್ಷಣಿಕ ಸಾಧನವಾಗಿ ಬಳಸಿಕೊಂಡಿವೆ. ಸ್ಥಳೀಯ ಪೋಲೀಸರೊಂದಿಗಿನ ಮಧ್ಯಸ್ಥಿಕೆ ಮತ್ತು ತರಬೇತಿಗಳಿಂದ ಹಿಡಿದು ಮಾನವ ಹಕ್ಕುಗಳ ಆಯೋಗದಂತಹ ರಾಷ್ಟ್ರೀಯ ಅಂತರರಾಷ್ಟ್ರೀಯ ಮಟ್ಟದವರೆಗೂ ಈ ವರದಿಯು ಬಳಕೆಯಾಗಿರುವುದು ಗಮನಿಸಬೇಕಾದ ಅಂಶ.

ವರದಿ, ಪ್ರಚಾರ ಮತ್ತು ಹಿಜ್ರಾ ಮತ್ತು ಕೋಥಿಗಳ ಚಳುವಳಿ ಎಲ್ಲವೂ ಪೋಲೀಸರೊಂದಿಗಿನ ಅಧಿಕಾರ ಸಂಬಂಧವನ್ನು ಬದಲಾಯಿಸಿವೆ. ಹಾಗೂ ಹಿಜ್ರಾಗಳು ಮತ್ತು ಕೋಥಿಗಳ ಹಕ್ಕುಗಳನ್ನು ಕುರಿತು ಸಾರ್ವಜನಿಕ ಚರ್ಚೆ ಆರಂಭಿಸಲು ಅವಕಾಶ ಕಲ್ಪಿಸಿವೆ. ಸಾಗಬೇಕಾದ ದಾರಿ ಇನ್ನೂ ಇದೆ ಹಾಗಾಗಿ ವರದಿಯು ಮುಖ್ಯವಾಗುತ್ತದೆ.

ಪ್ರಾಮುಖ್ಯತೆ ಪಡೆದುಕೊಳ್ಳುತ್ತಿರುವ ಲೈಂಗಿಕತೆ ಚಳುವಳಿ ಕುರಿತು ಸ್ವಲ್ಪ ಮಟ್ಟಿಗಿನ ಮಾಹಿತಿ ಇಂಗ್ಲೀಷಿನಲ್ಲಿದೆ. ಆದರೆ ಕನ್ನಡದಲ್ಲಿ ಏನೂ ಇಲ್ಲವೆಂದೇ ಹೇಳಬೇಕು. ಹಾಗಾಗಿ ಈ ವರದಿಯ ಕನ್ನಡಾನುವಾದಬೇಕೆಂದು ಹಿಜ್ರಾ ಮತ್ತು ಕೋಥಿ ಸಮುದಾಯ ಒತ್ತಾಯಿಸಿತು. ಪರಿಸ್ಥಿತಿ ಬೆಂಗಳೂರಿನಲ್ಲೇ ಹೀಗಾದರೆ, ಹಿಜ್ರಾ ಮತ್ತು ಕೋಥಿ ಸಮುದಾಯ ಕುರಿತು ಏನೇನೂ ಮಾಹಿತಿ ಇಲ್ಲದ ಕರ್ನಾಟಕದ ಇತರ ಜಿಲ್ಲೆಗಳ ಪರಿಸ್ಥಿತಿ ಇನ್ನೂ ದುಸ್ತರವಾಗಿದೆ. ಹಾಗಾಗಿ ಈ ಮುದ್ರಣದೊಂದಿಗೆ, ವರದಿಯ ಕನ್ನಡಾನುವಾದವನ್ನು ಪ್ರಕಟಿಸುವುದು ರಾಜಕೀಯವಾಗಿ, ನೈತಿಕವಾಗಿ ಮುಖ್ಯವಾಗುತ್ತದೆ.

ಕಳೆದ ವರದಿಯಿಂದ ಇಲ್ಲಿಯವರೆಗಿನ ಬದಲಾವಣೆ ಕುರಿತು ಹೇಳಬೇಕೆಂದರೆ ತಂಡದ ಸದಸ್ಯೆ ಮತ್ತು ದಿಟ್ಟ ಹೋರಾಟಗಾರ್ತಿ ಫಮಿಲಾಳ ಬದುಕು ಆತ್ಮಹತ್ಯೆಯಲ್ಲಿ ಕೊನೆಗೊಂಡಿದ್ದು ಅತ್ಯಂತ ನೋವಿನ ಸಂಗತಿ. ಹಿಜ್ರಾ ಸಮುದಾಯದ ಜಗತ್ತನ್ನು ಸ್ವಲ್ಪಮಟ್ಟಿಗೆ ಅರ್ಥಮಾಡಿಕೊಂಡಿದ್ದೇವೆ ಎಂದು ಕೊಂಡಿದ್ದ ನಮಗೆಲ್ಲರಿಗೆ ಫಮಿಲಾಳ ಆತ್ಮಹತ್ಯೆ ಛಡಿ ಏಟಿನಂತಹ ಎಚ್ಚರಿಕೆ ನೀಡಿತು. ದಿಟ್ಟತನದ ಹಿಜ್ರಾ ಕಾರ್ಯಕರ್ತೆಗೂ ಕೂಡ ಈ ಪರಲಿಂಗೀಯ ಪುರುಷ ಪ್ರಧಾನತೆಯ ಸಮಾಜದ ಒತ್ತಡವನ್ನು ತಾಳಿಕೊಳ್ಳುವುದು ಅಸಾಧ್ಯವಾಗಬಹುದು ಎಂಬುದು ಮನದಟ್ಟಾಯಿತು. ಮಾನವ ಹಕ್ಕುಗಳ ಸಮುದಾಯದ ಭಾಗವಾಗಿರುವ ನಮಗೆ ವ್ಯಾಪಕವಾದ ರಾಜಕೀಯ ಚಳುವಳಿಯ ಭಾಗವಾಗುವುದಷ್ಟೆ ಅಲ್ಲ, ನಮ್ಮ ಸಹ-ಸಂಗಾತಿಗಳು ವೈಯಕ್ತಿಕ ಬದುಕಿನಲ್ಲಿ ತೀವ್ರವಾದ ನಿರಾಶೆಯ, ವೈಫಲ್ಯದ ಭಾವನೆಯಲ್ಲಿ ಕುಗ್ಗಿದಾಗ ಆಧಾರವಾಗಬೇಕೆಂಬುದು ಮುಖ್ಯ ಎಂಬ ಎಚ್ಚರಿಕೆ ಸಿಕ್ಕಂತಾಯಿತು. ವೆಯಕ್ತಿಕ ನೆಲೆಯಲ್ಲೂ ಗಮನ ನೀಡಲು ಸಮಯ ಕೊಡಬೇಕು ಎಂಬುದನ್ನು ಮತ್ತು ವೈಯಕ್ತಿಕವಾದುದೆಲ್ಲ ರಾಜಕೀಯವಾದುದೇ ಎಂಬ ಸ್ತ್ರೀವಾದಿ ಸೂಕ್ತಿಯನ್ನು ನಾವು ಗಂಭೀರವಾಗಿ ಪರಿಗಣಿಸಬೇಕಿದೆ.

ಅತ್ಯಂತ ಭರವಸೆ ಹುಟ್ಟಿಸಿದ್ದ ಸಮುದಾಯ ಆಧಾರಿತ ಗುಂಪು 'ವಿವಿಧ' ಫಮಿಲಾಳ ಆತ್ಮಹತ್ಯೆಯ ಪರಿಣಾಮದಿಂದಾಗಿ ಕುಸಿದು ಬಿದ್ದಿದ್ದು ನಿಜಕ್ಕೂ ವಿಷಾದನೀಯ. ಇದು ಸಶಕ್ತಗೊಳಿಸುವ ಪ್ರಕ್ರಿಯೆ ಎಷ್ಟು ನಾಜೂಕಿನದು ಮತ್ತು ಕೆಲವು ತಪ್ಪುಗಳಿಂದಾಗಿ ಎಷ್ಟು ಸುಲಭವಾಗಿ ಇಡೀ ಚಳುವಳಿಗೆ ಹಿನ್ನಡೆಯುಂಟಾಗುತ್ತದೆ ಎಂಬುದನ್ನು ಸೂಚಿಸಿತು. ಸಶಕ್ತತೆಯ ಪ್ರಕ್ರಿಯೆ ನಿಧಾನವಾದುದು ಮತ್ತು ನಿರಂತರ ಕ್ರಿಯಾಶೀಲತೆಯನ್ನು ಬಯಸುವ ಕಷ್ಟಕರವಾದ ಪ್ರಕ್ರಿಯೆ ಎಂಬುದು ಸ್ಪಷ್ಟವಾಗಿದೆ. ಇದನ್ನು, 2004ರಲ್ಲಿ ಪೋಲೀಸರಿಂದ ಅಮಾನುಷವಾಗಿ ಅತ್ಯಾಚಾರಕ್ಕೆ ಒಳಗಾದ ಹಿಜ್ರಾ ಲೈಂಗಿಕ ಕಾರ್ಮಿಕಳಾದ ಕೋಕಿಲಾಳ ಘಟನೆ ಸಾಬೀತುಪಡಿಸಿತು. ಈ ಘಟನೆಯ ನಂತರ ನಡೆದ ಪ್ರತಿಭಟನೆ ಮತ್ತು ರ್‍ಯಾಲಿಯು ಸೂಚಿಸಿದ್ದೇನೆಂದರೆ ಹಿಂಸೆಗೆ ಸರಳವಾದ ಪರಿಹಾರಗಳಿಲ್ಲ ಮತ್ತು ಹಿಂಸೆಯನ್ನು ಎದುರಿಸಲು, ಸಂವಿಧಾನಾತ್ಮಕ ಚೌಕಟ್ಟಿಗೆ ಬದ್ಧರಾಗಿರುವಂತೆ ಪೋಲೀಸರ ಮೇಲೆ ನಿರಂತರವಾಗಿ ಒತ್ತಡ ಹೇರಬೇಕು ಎಂಬುದನ್ನು.

2003 ರಿಂದೀಚೆಗೆ ಆದ ಮತ್ತೊಂದು ಮಹತ್ವದ ಬದಲಾವಣೆ ಎಂದರೆ, ಹಲವಾರು ಹೆಚ್.ಐ.ವಿ./ಏಡ್ಸ್ ತಡೆ ಯೋಜನೆಗಳು ಕರ್ನಾಟಕದ ಹಲವಾರು ಜಿಲ್ಲೆಗಳಲ್ಲಿ ಪ್ರಾರಂಭವಾದದ್ದು. ಈ ಯೋಜನೆಗಳು ಹಿಜ್ರಾ ಮತ್ತು ಕೋಥಿಗಳು ಹೆಚ್.ಐ.ವಿ/ಏಡ್ಸ್‌ಗೆ ಸುಲಭವಾಗಿ ಈಡಾಗುವ ಜನಸಂಖ್ಯೆ ಎಂದು ಪರಿಗಣಿಸಿ ಅವರ ಮೇಲೆ ಕೇಂದ್ರಿತವಾಗಿವೆ. ಇದರ ಪರಿಣಾಮವೇನೆಂಬ ಪ್ರಶ್ನೆ ರಾಜಕೀಯವಾಗಿ ಮುಖ್ಯವಾದುದು. ಈ ಯೋಜನೆಗಳು ಒಂದೆಡೆ ಹಿಜ್ರಾ ಮತ್ತು ಕೋಥಿಗಳನ್ನು ಗುರುತಿಸಿ ಅವರು ಕೆಲಸ ಮಾಡುವ ಸ್ಥಳಗಳ ನಕಾಶೆ ರಚಿಸಲು ಕಾರಣವಾಗಿ ಪೋಲೀಸರ ಕಿರುಕುಳಕ್ಕೆ ಇನ್ನೂ ಹೆಚ್ಚು ಈಡಾಗುವಂತೆ ಮಾಡಬಹುದು. ಮತ್ತೊಂದೆಡೆ ಕರ್ನಾಟಕದ ಇತರ ಭಾಗಗಳಲ್ಲಿ ಹಿಜ್ರಾ ಮತ್ತು ಕೋಥಿಗಳನ್ನು ಸಶಕ್ತಗೊಳಿಸಿ ತಮ್ಮ ಹಕ್ಕುಗಳಿಗಾಗಿ ಒತ್ತಾಯಿಸುವಂತೆ ಮಾಡುವ ಸಾಧ್ಯತೆಯೂ ಇರಬಹುದು. ಈ ವಿಷಯವನ್ನು ಸದ್ಯದ ಪರಿಸ್ಥಿತಿಯಲ್ಲಿ ಮಾನವ ಹಕ್ಕುಗಳ ದೃಷ್ಟಿಕೋನದಿಂದ ವಿಶ್ಲೇಷಿಸಿ ಕ್ರಿಯಾತ್ಮಕವಾಗುವುದು ಸವಾಲಿನದೆಂದು ಮಾತ್ರ ಹೇಳಬಹುದು.

ನಮ್ಮ ಕ್ರಿಯಾಶೀಲ ಶಕ್ತಿಯನ್ನು ಮರುಗೂಡಿಸಿಕೊಂಡು ಹೊಸ ಕಸುವಿನೊಂದಿಗೆ, ಮುರಿದು ಬಗ್ಗಿಸಬೇಕೆನ್ನುವ ಪರ ಲಿಂಗೀಯ ಪುರುಷ ಪ್ರಧಾನ, ಬಂಡವಾಳಶಾಹಿ ಸಮಾಜದ ರಚನೆಗಳನ್ನು ಎದುರಿಸಬೇಕಿದೆ. ಅದೇ ಘಮಿಲಾಳಗೆ ಅರ್ಪಿಸುವ ನಿಜವಾದ ಶ್ರದ್ಧಾಂಜಲಿ. ಎದುರಿಸುವ ಕೆಲಸವನ್ನು ಘಮಿಲಾ ತನ್ನ ಅತ್ಯಲ್ಪ ಬದುಕಿನ ಅವಧಿಯಲ್ಲಿ ಅತ್ಯಂತ ಘನತೆಯಿಂದ, ಗೌರವದಿಂದ ಮಾಡಿದಳು. ಈ ವರದಿ ಪ್ರಕಟವಾಗುವ ಮುನ್ನವೆ ಅಗಲಿದ ಮತ್ತೊಬ್ಬ ಕಾರ್ಯಕರ್ತೆ ಕಾಜೋಲಳನ್ನು ಗೌರವದಿಂದ ನೆನೆಯುತ್ತೇವೆ.

# ಮುನ್ನುಡಿ

## ಇಚ್ಛೆ, ಬಯಕೆಗಳ ಶಾಸ್ತ್ರ ಬಂಧಿಸೀತೆ ?

" ಈ ಜಗತ್ತಿನಲ್ಲಿ ನನ್ನನ್ನು ಹೆಣ್ಣೆಂದು ಪರಿಗಣಿಸುವವನು ಅವನೊಬ್ಬನೆ, ಅದಕ್ಕಾಗಿ ಅವನಿಂದಾಗುವ ತೊಂದರೆಗಳನ್ನೆಲ್ಲ ಸಹಿಸಿಕೊಳ್ಳುತ್ತೇನೆ" – ಫಮಿಲಾ

" ತುಂಬ ಪ್ರೀತಿ ಮಾಡೋ ಗಂಡಬೇಕು, ಚೆನ್ನಾಗಿ ಮನೆ, ಸಂಸಾರ ಮಾಡೋಕೆ ತುಂಬ ಆಸೆ ನಂಗೆ ಹಂಗಾದ್ರೆ ದೇವಿಗೆ ಪೂಜೆ ಮಾಡಿಸ್ತೀನಿ ಅಂತ ಕೇಳ್ಕೊಂಡಿದೀನಿ" – ರೇವತಿ

ಫಮಿಲಾ, ರೇವತಿ ಇಬ್ಬರು ಹಿಂದೊಮ್ಮೆ ಗಂಡು ಹುಡುಗರಾಗಿದ್ದರು ಎಂದು ನಂಬುವುದೇ ಕಷ್ಟ. ಇವರಿಬ್ಬರೂ ಹಿಜ್ರಾಗಳು. ಲೈಂಗಿಕತೆ ಅಲ್ಪಸಂಖ್ಯಾತರ ಮಾನವ ಹಕ್ಕುಗಳಿಗಾಗಿ ಹೋರಾಡುವವರು. ಹಾಗೆ ಇನ್ನಿತರ ಮಾನವ ಹಕ್ಕುಗಳ ಹೋರಾಟವನ್ನು ಬೆಂಬಲಿಸುವವರು. ಎಲ್ಲರಂತೆ ಉಣ್ಣುವ, ಉಡುವ, ಆತ್ಮಗೌರವದಿಂದ ಬದುಕುವ ಆಸೆ , ಕನಸುಗಳನ್ನಿಟ್ಟುಕೊಂಡವರು. ಹೆಣ್ಣಾಗಿ ಬದುಕಲು ಬಯಸುವ ಹಿಜ್ರಾಗಳು, ಅವರಿರುವ ರೀತಿಯಿಂದಾಗಿಯೇ ಅವರು 'ನಾರ್ಮಲ್' ಸಮಾಜದಿಂದ ಅನುಭವಿಸುವ ಅವಮಾನ, ತಾರತಮ್ಯ, ಅವಗಣನೆ, ಹಿಂಸೆ, ದೌರ್ಜನ್ಯ ಬೆಚ್ಚಿ ಬೀಳಿಸುವ ವಂತಹದು. ಅಂತಹ ಹಲವು ಸತ್ಯಗಳನ್ನು ಈ ವರದಿ ನಮ್ಮ ಮುಂದಿಡುತ್ತದೆ.

ನಾನು ಭಾಗವಾಗಿರುವ ಸ್ವಾಯತ್ತ ಮಹಿಳಾ ಚಳುವಳಿಯ ಹಿನ್ನೆಲೆಯಲ್ಲಿ ಹೇಳುವುದಾದರೆ– ಕಿರುಕುಳ, ಹಿಂಸೆ, ದೌರ್ಜನ್ಯ, ಅತ್ಯಾಚಾರದ ಹಿನ್ನೆಲೆಯಲ್ಲೇ ನೋಡಲಾಗುತ್ತಿದ್ದ ಲೆಂಗಿಕತೆ ವಿಷಯವನ್ನು, ರೂಢಿಗತ ಗಂಡು–ಹೆಣ್ಣಿನ ಚೌಕಟ್ಟಿನಿಂದ ಹೊರತು ಪಡಿಸಿ ಬಹಿರಂಗವಾಗಿ ಚರ್ಚಿಸಲು ಪ್ರಾರಂಭಿಸಿದ್ದು 97ರಲ್ಲಿ ನಡೆದ ರಾಂಚಿ ರಾಷ್ಟ್ರೀಯ ಸಮಾವೇಶದಲ್ಲಿ ಎನ್ನಬಹುದು. ಖಾಸಗೀಯಾಗೇ ಚರ್ಚಿತವಾಗಬೇಕೆಂಬ ಒತ್ತಡವನ್ನು ಮುರಿದು, ರಾಜಕೀಯ ಪ್ರಶ್ನೆಯಾಗಿ ಲೆಂಗಿಕತೆಯನ್ನು ಚರ್ಚಿಸುವ ಪ್ರಯತ್ನ ಮಾಡಿದವರೆಂದರೆ, ಹಲವಾರು ವರ್ಷಗಳಿಂದ ಸ್ವಾಯತ್ತ ಮಹಿಳಾ ಚಳುವಳಿಯೊಂದಿಗೆ ಗುರುತಿಸಿಕೊಂಡಿರುವ ಲೆಸ್ಬಿಯನ್ ಮಹಿಳೆಯರು. ಆರನೇ ರಾಷ್ಟೀಯ ಸಮಾವೇಶದಲ್ಲಿ 'ವಿಮೆನ್ ಹೂ ಲವ್ ವಿಮೆನ್' ಎಂಬ ಶೀರ್ಷಿಕೆಯಡಿ ಚರ್ಚಿಸಲಾಯಿತು.

ಲಿಂಗ ಪ್ರಶ್ನೆಯನ್ನು ಹಿಜ್ರಾಗಳ ಹಿನ್ನೆಲೆಯಲ್ಲಿ ನೋಡಿದಾಗ ಗೋಚರಿಸುವ ವೈರುಧ್ಯಗಳು, ಒಳನೋಟಗಳು ವಿಭಿನ್ನವಾದವು. ಒಂದು ಸಮುದಾಯವಾಗಿ ಬದುಕುವ ಹಿಜ್ರಾಗಳಿಗೆ ತಮ್ಮದೇ ಕುಟುಂಬ, ರೀತಿ–ರಿವಾಜು, ನೀತಿ–ನಿಯಮ,

ದಂಡ-ಶಿಕ್ಷೆ ಎಲ್ಲವೂ ಇದೆ. ಇವರ ನಡುವಿನದು ರಕ್ತ ಸಂಬಂಧವಲ್ಲ. ವಿವಿಧ ಜಾತಿ, ಧರ್ಮ, ಭಾಷೆ, ಪ್ರದೇಶಗಳಿಗೆ ಸೇರಿದವರು ಒಂದು ಸಮುದಾಯವಾಗಿ ಬದುಕುವುದು ಗಮನಿಸಬೇಕಾದ ಅಂಶ. ಹಿಜ್ರಾಗಳ ಸಂದರ್ಭದಲ್ಲಿ ಲಿಂಗ ಎಂಬುದು ಆಯ್ಕೆಯಾಗಿದೆ. ಹೆಣ್ಣಿನಂತೆ ಬದುಕಬೇಕೆಂಬ ಕಾರಣಕ್ಕೆ ಅವರು ಅವಮಾನ, ತಾರತಮ್ಯ, ಹಿಂಸೆಗೆ ಒಳಗಾಗುತ್ತಾರೆ. ಲಿಂಗ ರಾಜಕಾರಣವು ಗಮನಿಸಬೇಕಾದ ಮುಖ್ಯ ಅಂಶವೇನೆಂದರೆ – ಲಿಂಗ ಅಸ್ಮಿತೆಯನ್ನು ಹುಟ್ಟಿನಿಂದ ಪಡೆದುಕೊಂಡಿರಲಿ ಆಯ್ಕೆಯಾಗಿ ಪಡೆದುಕೊಂಡಿರಲಿ ಅನುಭವಿಸುವ ಅವಮಾನ, ಹಿಂಸೆಯಲ್ಲಿರುವ ಸಾಮ್ಯತೆಯನ್ನು. ಸಂಬಂಧ ಹೆಣ್ಣು-ಹೆಣ್ಣು, ಗಂಡು-ಗಂಡು, ಹೆಣ್ಣು-ಗಂಡು ಯಾವುದೇ ಆಗಿರಲಿ ನಾವು ಪ್ರಶ್ನಿಸಬೇಕಾಗಿರುವುದು ಅದರೊಳಗಿನ ಮೇಲು ಕೀಳೆಂಬ ತಾರತಮ್ಯ ಮತ್ತು ಅಧಿಕಾರವನ್ನು. ಇಲ್ಲಿ, ಕಾಮದ ಮೂಲದಲ್ಲೂ ಇರುವ ಅಧಿಕಾರವನ್ನು ಕುರಿತು ಗಾಂಧಿ ಆಡುವ ಮಾತುಗಳು ನೆನಪಾಗುತ್ತವೆ. ಸಂಬಂಧದಲ್ಲಿ ಮುಖ್ಯವಾಗಬೇಕಾಗಿರುವುದು ಪರಸ್ಪರ ಅನ್ಯೋನ್ಯತೆ, ವಿಶ್ವಾಸ, ಬದ್ಧತೆಯಷ್ಟೆ. ಇಚ್ಛೆಯಂತೆ ಬದುಕುವುದು ಎಲ್ಲ ಮನುಷ್ಯ ಜೀವಿಗಳ ಹಕ್ಕು. ತಾವಿರುವ ರೀತಿಯಿಂದಾಗಿ ಅನುಭವಿಸುವ ತಾರತಮ್ಯ, ಹಿಂಸೆಯನ್ನು ವಿರೋಧಿಸಿ ಸಮಾನತೆಗಾಗಿ,ಆತ್ಮಗೌರವಕ್ಕಾಗಿ ಹೋರಾಡಲು ಹಿಜ್ರಾಗಳು ಸಂಘಟಿತರಾಗುತ್ತಿದ್ದಾರೆ. ಸಮಾನತೆಯನ್ನು ನಂಬುವ ಮಹಿಳಾ ಚಳುವಳಿಗೆ ಅವರ ಹೋರಾಟವನ್ನು ಬೆಂಬಲಿಸುವುದು ರಾಜಕೀಯವಾಗಿ ಮುಖ್ಯವಾಗುತ್ತದೆ.

ಸಮಾನತೆ, ಸ್ವಾಯತ್ತತೆ, ಘನತೆಯ ಬದುಕಿಗಾಗಿ ನಡೆಸುವ ಹೋರಾಟಗಳನ್ನು ವ್ಯವಸ್ಥಿತವಾಗಿ ಹತ್ತಿಕ್ಕಲಾಗುತ್ತದೆ. ಎಲ್ಲವನ್ನು Co-opt ಮಾಡಿಕೊಳ್ಳುವ ಪ್ರಭುತ್ವ, training, documentation, intrastructure ನೆಪದಲ್ಲಿ ಹೋರಾಟದ ಸತ್ವವನ್ನೇ dilute ಮಾಡಿಬಿಡುವ ಫಂಡಿಂಗ್ ಏಜೆನ್ಸಿಗಳು, ಹೆಣ್ಣಿನಂತೆ ಕಾಣಿಸಬೇಕೆಂಬ ಇಚ್ಛೆಯನ್ನೆ ಬಂಡವಾಳ ಮಾಡಿಕೊಂಡು Beauty industry ಗೆ, ಹಿಜ್ರಾಗಳನ್ನು ಸರಕಾಗಿಸಿಕೊಂಡು ಬಿಡುವ ಮಾರುಕಟ್ಟೆ ಸಂಸ್ಕೃತಿಯ ಬಗ್ಗೆ ಲೈಂಗಿಕತೆ ಅಲ್ಪ ಸಂಖ್ಯಾತರ ಚಳುವಳಿಯು ಕಟ್ಟೆಚ್ಚರದಿಂದಿರಬೇಕಾಗುತ್ತದೆ. ಮುಖ್ಯವಾಹಿನಿಗೆ ಬರಬೇಕೆಂಬ ಧಾವಂತದಲ್ಲಿ ಚಲಾವಣೆಯ ನಾಣ್ಯಗಳಾಗಿ ಬಿಡುವುದನ್ನು ಸೂಕ್ಷ್ಮವಾಗಿ ಅವಲೋಕಿಸಿಕೊಳ್ಳಬೇಕಾಗುತ್ತದೆ. ಈ ಮಾತಗಳನ್ನು ಬರೆಯುವಾಗ ಫಮಿಲಾ ನೆನಪಾಗುತ್ತಿದ್ದಾಳೆ.

ಫಮಿಲಾ ಮಿಂಚಿ ಮರೆಯಾದಾಗ ಅವಳ ವಯಸ್ಸು ಕೇವಲ 24. ಧೈರ್ಯ ಉತ್ಸಾಹಗಳಿದ್ದ ಸ್ವಾಯತ್ತತೆ, ಸ್ವಾತಂತ್ರ್ಯವನ್ನು ಬಯಸುತ್ತಿದ್ದ ಫಮಿಲಾ ಬಂಡೆಳುವ ಸ್ವಭಾವದವಳು. ಒಳ್ಳೇ articulation ಇದ್ದ ಅವಳಿಗೆ ಲೈಂಗಿಕತೆ ಅಲ್ಪಸಂಖ್ಯಾತರ ಪ್ರಶ್ನೆಯನ್ನು ರಾಜಕೀಯ ಪ್ರಶ್ನೆಯಾಗಿ ಗ್ರಹಿಸುವ ಒಳನೋಟವಿತ್ತು. ಚಳುವಳಿಗಳು ಬಯಸುವ ready made asset ನಂತಿದ್ದಳು. ಬಂಡೇಳುವ ಸ್ವಭಾವದೊಳಗೆ ಮತ್ತೊಂದು ಜೀವ ಅಡಗಿತ್ತು. ಸಹಾಯಬೇಕೆನ್ನುವವರು, ಅಸಹಾಯಕರು, ಸೊಂಭೇರಿಗಳು ಎಲ್ಲರನ್ನೂ ಗುಡ್ಡೆ ಹಾಕಿಕೊಂಡು ತನ್ನ ದುಡ್ಡು, ಧೈರ್ಯ, ಉತ್ಸಾಹ, ಮನೆ, ಮನದಲ್ಲಿ ಜಾಗ ನೀಡುತ್ತಿದ್ದ , ಹಿಜ್ರಾಗಳೆಲ್ಲ ಒಂದಾಗಿ, ದುಡ್ಡೆತ್ತಿ ಯಶಸ್ವಿಯಾಗಿ ನಡೆಸಿದ ಹಿಜ್ರಾ ಹಬ್ಬದ ಹಿಂದೆ ಜವಾಬ್ದಾರಿಯುತ ಪಾತ್ರ ವಹಿಸಿದ್ದರೂ ವೇದಿಕೆಯ ಮೇಲೆ ಕಾಣಿಸಿಕೊಳ್ಳದಿದ್ದ, ಸಂಗಾತಿಗೆ, ಪ್ರೀತಿಗೆ ಹಂಬಲಿಸುತ್ತಿದ್ದ ಆ ಜೀವ ಉಸಿರುಗಟ್ಟಿದ್ದು ಹೇಗೆ? ಯಾಕೆ? ಉತ್ತರಕ್ಕಾಗಿ ನಾವು ನಮ್ಮೆದೆಯನ್ನು ಮುಟ್ಟಿ ನೋಡಿಕೊಳ್ಳಬೇಕು.

ಫಮಿಲಾಳ ಸಮಾಧಿಯ ಮೇಲೆ ವಿಜಯಕುಮಾರ್ ಎಂಬ ಅವಳ ಹುಟ್ಟು ಹೆಸರೇ ಇರಬೇಕೆಂದು ಅವಳ ತಂದೆ ಒತ್ತಾಯಿಸಿದರಂತೆ. ಈಗಲಾದರೂ ಅವಳ ಇಚ್ಛೆ, ಬಯಕೆಯಂತೆ ಅವಳನ್ನು ಹೆಣ್ಣಾಗಿ ಒಪ್ಪಿ 'ಫಮಿಲಾ' ಎಂದೇ ಬರೆಸಿ ಎಂದು ಸ್ನೇಹಿತರು ಒತ್ತಾಯ ಮಾಡಿದರಂತೆ ಕೊನೆಗೂ ಅವರ ತಂದೆ ಒಪ್ಪಿಕೊಂಡಿದ್ದು 'ವಿಜಯಕುಮಾರ್ ಅಲಿಯಾಸ್ ಫಮಿಲಾ' ಎಂದು ಬರೆಸಲು.

ಏನು ಈ ಗಂಡು-ಹೆಣ್ಣು ಎಂಬುದು? ಶಿಶ್ನ, ವೀರ್ಯ, ಯೋನಿ, ಗರ್ಭ, ಅಂಡ, ಮೊಲೆಯ ಜೀವಶಾಸ್ತ್ರವೇ? ಇಚ್ಛೆ, ಆಸೆ, ಬಯಕೆ, ಕನಸು ಶಾಸ್ತ್ರಗಳೊಳಗೆ ಬಂಧಿಗಳೇ?

ಮೊಲೆ ಮುಡಿ ಬಂದರೆ ಹೆಣ್ಣೆಂಬರಯ್ಯ

ಗಡ್ಡ ಮೀಸೆ ಬಂದೊಡೆ ಗಂಡೆಂಬರಯ್ಯ

ನಡುವೆ ಸುಳವಾತ್ಮ

ಹೆಣ್ಣೂ ಅಲ್ಲ ಗಂಡೂ ಅಲ್ಲ ಕಾಣಾ ರಾಮನಾಥ

ಎಂದ **ಜೇಡರ ದಾಸಿಮಯ್ಯ** ನಿಗೆ ಶರಣು

**– ದು. ಸರಸ್ವತಿ**

# ಕೃತಜ್ಞತೆಗಳು

ಹಲವರ ಶ್ರಮದ ಫಲವಾಗಿ ಈ ವರದಿಯು ನಿಮ್ಮ ಮುಂದಿದೆ. ಕ್ವಿಯರ್ ಜನರ ಹಕ್ಕುಗಳನ್ನು ಮಾನವ ಹಕ್ಕುಗಳ ಪರಿಧಿಯೊಳಗೆ ತರಲು ಹಾಗೂ ಮಾನವ ಹಕ್ಕುಗಳ ಸಮುದಾಯದ ಭಾಗವಾಗಿಸಲು ನಾವು ಮಾಡಿದ ಪ್ರಯತ್ನವನ್ನು ಉತ್ಸಾಹದಿಂದ ಪ್ರೋತ್ಸಾಹಿಸಿದ ಪ್ರೊ. ಉಪೇಂದ್ರ ಬಕ್ಷಿ

- ಈ ವರದಿಯು ತಮ್ಮ ಜೀವನದಲ್ಲಿ ಏನಾದರೂ ಬದಲಾವಣೆ ತರಬಹುದೆಂಬ ಭರವಸೆಯಲ್ಲಿ, ಅಪರಿಚಿತರೊಂದಿಗೆ ತಮ್ಮ ಬದುಕಿನ ಕತೆಗಳನ್ನು ಧಾರಾಳವಾಗಿ ಹಂಚಿಕೊಂಡ ಹಿಜ್ರಾಗಳು ಮತ್ತು ಕೋಥಿಗಳು
- ತಮ್ಮ ಸಂಪನ್ಮೂಲಗಳು ಹಾಗೂ ದಾಖಲೆಗಳನ್ನೂ ಒದಗಿಸುವುದರ ಜೊತೆಗೆ ವರದಿಯ ಕರಡನ್ನು ಕುರಿತು ಪ್ರತಿಕ್ರಿಯೆ ಮತ್ತು ಟೀಕೆಗಳನ್ನು ನೀಡಿದ ಸಂಗಮ ಸಂಸ್ಥೆ
- ವರದಿಯಲ್ಲಿನ ಪ್ರಮುಖ ಭಾಗಗಳಿಗಾಗಿ ಕೆಲಸ ಮಾಡಿದ ಅಲೋಕ್ ಗುಪ್ತಾ
- ಅಂತರ ಲಿಂಗೀಯತೆ ಮತ್ತು ಹಿಜ್ರಾಗಳ ಚಿಕಿತ್ಸೆಯನ್ನು ಕುರಿತ ವೈದ್ಯಕೀಯ ಅಂಶಗಳ ಕುರಿತು ತಮ್ಮ ಪ್ರತಿಕ್ರಿಯೆಯನ್ನು ಹಂಚಿಕೊಂಡ ಡಾ. ವೆಂಕಟೇಶ್
- ಕನ್ನಡಕ್ಕೆ ಅನುವಾದ ಮಾಡಿದ ದು. ಸರಸ್ವತಿ, ಉಷಾ ಬಿ.ಎನ್., ಸುಮತಿ
- ಮುದ್ರಣದ ಜವಾಬ್ದಾರಿ ಹೊತ್ತ ಕ್ರಿಯಾ ಪ್ರಕಾಶನ
- **ಡಿ.ಟಿ.ಪಿ. ಮಾಡಿಕೊಟ್ಟ ಪಿ. ಸುರೇಶ್**

ಇವರೆಲ್ಲರನ್ನು ಕೃತಜ್ಞತೆಯಿಂದ ನೆನೆಯುತ್ತೇವೆ. ವರದಿ ಕುರಿತು ಸಲಹೆ, ಪ್ರತಿಕ್ರಿಯೆಗಳನ್ನು ಸ್ವಾಗತಿಸುತ್ತೇವೆ. ಸಂಪರ್ಕಿಸಬಹುದಾದ ಇ-ಮೇಲ್ ವಿಳಾಸ (ರಾಮದಾಸ್ ರಾವ್) ramdas_rao@hotmail.com ಅಥವಾ (ಅರವಿಂದ್ ನಾರಾಯಣ್) anarrain@yahoo.co.in

ಸತ್ಯಶೋಧನ ಸಮಿತಿ ಸದಸ್ಯರು

ಅರವಿಂದ್ ನಾರಾಯಣ್ (ಎ.ಎಲ್.ಎಫ್)

ಶಕ್ಕುನ್ (ವಿಮೋಚನ)

ಮುದ್ದಪ್ಪ (ಡಿಸ್ಕ್)

ಬಾಬಯ್ಯ ಮತ್ತು ಶ್ರೀಧರ (ಪಿ ಡಿ ಎಫ್)

ಘಮಿಲಾ (ಸಂಗಮ)

ರಾಮದಾಸ್ ರಾವ್ (ಪಿ.ಯು.ಸಿ.ಎಲ್. ಕರ್ನಾಟಕ) ಪಿ.ಯು.ಸಿ.ಎಲ್. ಕರ್ನಾಟಕದ ಸದಸ್ಯರು

ಅಧ್ಯಾಯ 1

# ಪರಿಚಯ

### 1.1 ಸಾರಾಂಶ

ಬೆಂಗಳೂರಿನಲ್ಲಿರುವ ಅಂತರ ಲಿಂಗೀಯ ಸಮುದಾಯದವರ ಅಂದರೆ ಹಿಜ್ರಾ ಹಾಗು ಕೋಥಿಗಳ ವಯಕ್ತಿಕ ಅನುಭವಗಳನ್ನು ಸಂಗ್ರಹಿಸುವ ಮೂಲಕ ಈ ಸಮುದಾಯದ ಬದುಕನ್ನು ಅರ್ಥಮಾಡಿಕೊಳ್ಳಲು ಈ ವರದಿ ಸಹಾಯಕವಾಗಿದೆ. ಈ ವರದಿಯು ಇಂದಿನ ಸಾಂಸ್ಕೃತಿಕ ಹಾಗು ಸಾಮಾಜಿಕ ಸಂದರ್ಭದಲ್ಲಿ ಸಿಲುಕಿದ ಇವರ ಬದುಕಿಗಿರುವ ಕೆಲವೆ ಕೆಲವು ದಾರಿಗಳಾದ ಬಿಕ್ಷೆ ಬೇಡುವುದು, ಇಲ್ಲವೇ ಲೈಂಗಿಕ ಕಾರ್ಮಿಕರಾಗುವುದನ್ನು ಹಾಗು ಪ್ರಸ್ತುತ ಕಾನೂನು ಹಿಜ್ರಾ ಹಾಗು ಕೋಥಿಗಳ ಬದುಕನ್ನು ಹೇಗೆ ನಿಯಂತ್ರಿಸುತ್ತದೆ ಎಂಬುದನ್ನು ವಿಶ್ಲೇಷಿಸುತ್ತದೆ. ಬೆಂಗಳೂರಿನ ಹಿಜ್ರಾ, ಕೋಥಿಗಳು ದಿನನಿತ್ಯ ಅನುಭವಿಸುವ ಹಿಂಸೆ, ಬೆದರಿಕೆ, ಲೈಂಗಿಕ ದೌರ್ಜನ್ಯದ ಕಟು ವಾಸ್ತವವನ್ನು ನಮ್ಮ ಮುಂದೆ ಈ ವರದಿ ಇಡುತ್ತದೆ. ಇದಲ್ಲದೆ ಈ ವಿವಿಧ ರೂಪಗಳಲ್ಲಿ ಇಂದು ಲೈಂಗಿಕ ಕಾರ್ಮಿಕರಾಗಿರುವ ಹಿಜ್ರಾ, ಕೋಥಿದಳು ಸಂಘಟಿತರಾಗುತ್ತಿರುವುದರ ಬಗ್ಗೆಯೂ ತಿಳಿಸಿದೆ.

ರೂಢಿಗತ ಲೈಂಗಿಕ ಹಾಗು *ಜೆಂಡರ್ ಪಾತ್ರಗಳನ್ನು ಒಪ್ಪಿ ಬಾಳದ ಸಮುದಾಯದ ಬಗ್ಗೆ ಮುಖ್ಯವಾಹೀ ಸಮಾಜಕ್ಕೆ ಇರುವ ಭಯ ಕಾಣಿಸಿಕೊಳ್ಳುವುದು ಈ ಸಮುದಾಯಕ್ಕೆ ಯಾವುದೇ ನಾಗರೀಕ ಹಕ್ಕುಗಳನ್ನು ಕೊಡಲು ನಿರಾಕರಿಸುವ ರೂಪದಲ್ಲಿ. ವರದಿಯ ಕೊನೆಯಲ್ಲಿ ಮುಂದೆ ಮಾನವ ಹಕ್ಕುಗಳ ಗುಂಪುಗಳು ಹಾಗು ಲೈಂಗಿಕ ಅಲ್ಪಸಂಖ್ಯಾತರ ಚಳವಳ ಕೈಗೊಳ್ಳಬಹುದಾದ **'ಕಾರ್ಯಯೋಜನೆ'** ಪ್ರಣಾಳಿಕೆಯನ್ನು ನೀಡಲಾಗಿದೆ.

ಇದರ ಅಂತಿಮ ಗುರಿ ಲೈಂಗಿಕ ಅಲ್ಪಸಂಖ್ಯಾತ ಸಮುದಾಯದ ನಾಗರೀಕ ಹಕ್ಕುಗಳನ್ನು ಹಾಗು ಆತ್ಮಗೌರವನ್ನು ಪಡೆದುಕೊಳ್ಳುವುದೇ ಆಗಿದೆ.

### 1.2 ವರದಿಯ ಅಗತ್ಯ ಹಾಗೂ ಉದ್ದೇಶ

2002ರಲ್ಲಿ ಸೀತಾ, ಶೀಲಾ, ವಿಮಲಾ, ಮಾಲತಿ ಎಂಬ 4 ಕೋಥಿ ಲೈಂಗಿಕ ಕಾರ್ಮಿಕರನ್ನು ರಸ್ತೆಯಲ್ಲಿ ಹಿಡಿದು ಬೆಂಗಳೂರಿನಲ್ಲಿನ ಸಂಪಂಗಿರಾಮನಗರದ ಪೋಲಿಸರು ಠಾಣೆಗೆ ಕರೆದುಕೊಂಡು ಹೋದರು. ಪೊಲೀಸು ಠಾಣೆಯಲ್ಲಿ ಅವರಿಗೆ ಕಿರುಕುಳ ನೀಡಿ, ಕೈ-

( ಜೆಂಡರ್: ಸಮಾಜಿಕವಾಗಿ ಹೆಣ್ಣು-ಗಂಡುಗಳ ಪಾತ್ರ, ನಡಾವಳಿಕೆಗಳು ರೂಡಿಬದ್ಧವಾಗಿ ಬಂದಂತಹವು. ಇದನ್ನೇ ಜೆಂಡರ್ ಎಂದು ಸ್ತ್ರೀವಾದವು ವಿವರಿಸುತ್ತದೆ. 'ಜೆಂಡರ್' ಮೂಲಕ ನಾವು ಸಮಾಜದಲ್ಲಿರುವ ಸ್ತ್ರೀ ಪುರುಷರ ಅಧಿಕಾರ ಸಂಬಂಧವನ್ನು ಅರ್ಥ ಮಾಡಿಕೊಳ್ಳಬಹುದು)

ಭುಜ ಕಾಲುಗಳ ತುಂಬ ಗಾಯಗಳಾಗುಷ್ಟು ಹೊಡೆದರು. ನಂತರ ಅವರನ್ನು ಬಿಡುಗಡೆ ಮಾಡಿ, ಮತ್ತೊಮ್ಮೆ ಇನ್ನೆಂದೂ ಬೆಂಗಳೂರಿನ ರಸ್ತೆಗಳಲ್ಲಿ ಕಾಣಿಸಿಕೊಳ್ಳಬಾರದು ಎಂಬ ಬೆದರಿಕೆಯನ್ನು ಹಾಕಲಾಯಿತು.

ಮಾನಸಿಕ ತೊಳಲಾಟ, ದೈಹಿಕ ನೋವಿನಿಂದ ತತ್ತರಿಸಿ ಹೊರಜಗತ್ತಿನಲ್ಲಿ ಮತ್ತೆ ಕಾಣಿಸಿಕೊಳ್ಳುವುದರ ಬಗ್ಗೆ ಭಯವಿದ್ದರೂ ಲೈಂಗಿಕ ಅಲ್ಪಸಂಖ್ಯಾತರ ಹಕ್ಕುಗಳಿಗೆಂದೆ ಇರುವ **'ಸಂಗಮಾ'** ಸಂಸ್ಥೆಗೆ ಇವರು ದೂರನ್ನು ನೀಡಿದರು. ಬೆಂಗಳೂರಿನ ರಸ್ತೆಗಳನ್ನು ಹಿಜ್ರಾ ಹಾಗು ಕೋಥಿಗಳಿಂದ ಮುಕ್ತಗೊಳಿಸಿ, **'ಶುದ್ಧೀಕರಣ'** ಮಾಡುತ್ತಿರುವುದಾಗ ಪೋಲೀಸರು ಘೋಷಿಸಿದರು. **'ದಂಧೆ'** ಕೆಲಸ ಮಾಡುತ್ತಿಲ್ಲವಾದರೂ ಅವರನ್ನು ಪ್ರತಿನಿತ್ಯ ಸೆಕ್ಷನ್ 8(ಬಿ), ಐ.ಟಿ.ಪಿ.ಎ. ಕಾಯ್ದೆ (ಅನೈತಿಕ ಸಾಗಣೆ ತಡೆ ಕಾಯ್ದೆ 1986) ಅಡಿಯಲ್ಲಿ ಅಪರಾಧವೆಂದು ಬಂಧಿಸಲಾಗುತ್ತಿತ್ತು.

ಇವೆಲ್ಲವು ಪ್ರತ್ಯೇಕವಾಗಿ ನಡೆದ ಘಟನೆಗಳೇನಲ್ಲ. ಕಳೆದ ತಿಂಗಳುಗಳಲ್ಲಿ ಬೆಂಗಳೂರಲ್ಲಿ ಕೋಥಿ ಹಾಗು ಹಿಜ್ರಾ ಲೈಂಗಿಕ ಕಾರ್ಮಿಕರ ಮೇಲೆ ಪೋಲಿಸರಿಂದ ಹಾಗು ಸಾರ್ವಜನಿಕರಿಂದ ದೈಹಿಕ ಹಲ್ಲೆ, ಕಿರುಕುಳಗಳು ಹೆಚ್ಚುತ್ತಿರುವುದನ್ನು ಗಮನಿಸಬಹುದು. ಆದರೆ ಅವರು ದಿನನಿತ್ಯ ಎದುರಿಸುವ ಬೈಗುಳ ಹಾಗು ಇನ್ನಿತರ ರೂಪದ ತಾರತಮ್ಯಗಳು ದಾಖಲಾಗದೆ ಬಂದಿದೆ.

ಮಾನವಹಕ್ಕುಗಳ ಉಲ್ಲಂಘನೆಗಳನ್ನು ದಾಖಲಿಸುವುದು ಯಾವುದೋ ಮಾನವ ಹಕ್ಕುಗಳ ಚಳವಳಿ ತಳಹದಿ ಎಂದೆನ್ನಬಹುದು. ಇದು ಕಿರುಕುಳ, ಹಲ್ಲೆ, ಹಿಂಸೆ ಹಾಗು ತಾರತಮ್ಯಗಳ ಅಪಾದನೆಗಳ ವಾಸ್ತವದ ಉದಾಹರಣೆಗಳೊಂದಿಗೆ ಸಮರ್ಥಿಸಿಲು ಮುಖ್ಯವಾಗುತ್ತದೆ. ಈ ವರದಿಯಲ್ಲಿ ಕಾಣಬಹುದಾದ ಕಿರುಕುಳ, ಲೈಂಗಿಕ ಹಿಂಸೆಯ ದಾಖಲೆಗಳು ಒಂದು ಇಡಿ ಸಮುದಾಯ ಹೇಗೆ ಅತಿರೇಕವನ್ನು ಮುಟ್ಟಿದ ಹಿಂಸೆ ಹಾಗು ತಲ್ಲಣಗಳಿಗೆ ತುತ್ತಾಗಿ ಎಲ್ಲ ಪ್ರಜೆಗಳಿಗೂ ಸಂವಿಧಾನ ನೀಡಿದರೂ ಸಮಾನ ನಾಗರೀಕ ಹಾಗು ರಕ್ಷಣೆಯ ಹಕ್ಕನ್ನು ಉಲ್ಲಂಘಿಸುತ್ತದೆ ಎಂದು ನಿರೂಪಿಸುತ್ತದೆ.

ಇದು ಮಾನವ ಹಕ್ಕುಗಳನ್ನು ಕುರಿತಾದ ಒಂದು ಚಿಂತನಾತ್ಮಕ ವರದಿಯಾದುದರಿಂದ, ಕೇವಲ ಮಾನವ ಹಕ್ಕುಗಳ ಉಲ್ಲಂಘನೆ ಹಾಗು ಕಿರುಕುಳದ ಅನುಭವಗಳಷ್ಟೇ ಈ ವರದಿಯನ್ನು ಮಿತಿಗೊಳಿಸಲು ಸಾಧ್ಯವಿಲ್ಲ. ಹಿಜ್ರಾ ಹಾಗು ಕೋಥಿಗಳನ್ನು ಸಾಂಪ್ರದಾಯಿಕವಾಗಿ 'ಕೆಳದರ್ಜೆ'ಗೆ ಸೇರಿದ ಸಮುದಾಯವೆಂದು ನೋಡಿರುವುದರಿಂದ ಹಾಗು ಅವರು ಸಂಘಟಿತರಾಗದಿರುವ ಕಾರಣದಿಂದ ಅವರ ಬದುಕನ್ನು ನಿರ್ಲಕ್ಷಿಸಲಾಗುತ್ತದೆ. ಇದಕ್ಕೆ ಕಾರಣವೆನೆಂದು ಅರ್ಥ ಮಾಡಿಕೊಳ್ಳುವುದು ಬಹಳ ಮುಖ್ಯವಾಗಿದೆ. ಹಿಜ್ರಾಗಳನ್ನು ಜನ ಹೇಗೆ ನೋಡುತ್ತಾರೆಂಬುದಕ್ಕೂ ಅವರ ವಿಶಿಷ್ಟ ಲೈಂಗಿಕತೆಗಳು, ಹಿಜ್ರಾ ಹಾಗು ಕೋಥಿಗಳನ್ನು ಸಮಾಜಿಕ ಶ್ರೇಣೀಕರಣದಲ್ಲಿ ಅತಿ ಕೆಳಮಟ್ಟದಲ್ಲೇ ಇರುವಂತೆ ಮಾಡಿದೆ.

ಈ ನಾಲ್ಕು ಕೋಥಿಗಳು ಸಂಗಮ ಸಂಸ್ಥೆಗೆ ತಮಗಾದ ಹಿಂಸೆಯ ಕುರಿತು ದೂರು ನೀಡಲು ಬಂದದ್ದು ಲೈಂಗಿಕ ಅಲ್ಪಸಂಖ್ಯಾತರ ಚಳವಳಿಯ ಪ್ರಾರಂಭವನ್ನು ಸೂಚಿಸುತ್ತದೆ. ಸಾರ್ವಜನಿಕ ಪ್ರತಿಭಟನೆ, ರಸ್ತೆಗಳಲ್ಲಿ ಧರಣಿ, ಆಪತ್ಕಾಲಿಕ ಮಧ್ಯಸ್ಥಿಕೆಗಳ ಮೂಲಕ ಹೊಸದೊಂದು ಚಳುವಳಿ

ಹುಟ್ಟಿಕೊಂಡಿತು. ಈ ಚಳುವಳಿಯು ಬೆಂಗಳೂರಿನ ಕೋಥಿ ಹಾಗೂ ಹಿಜ್ರಾ ಸಮುದಾಯಕ್ಕೆ ಒಂದು ವಿಭಿನ್ನ ಹಾಗೂ ಸಾರ್ವಜನಿಕ (ರಾಜಕೀಯ) ಅಸ್ಮಿತೆಯನ್ನು ನೀಡಿತು.

ಸರ್ಕಾರ, ಪರಿವಾರ, ಸಮಾಜ ಹಾಗು ಕಾನೂನುಗಳ ಕೈಯಿಂದ ನಡೆಯುತ್ತಿರುವ ಶೋಷಣೆಯ ಪರಿಸ್ಥಿತಿಯಲ್ಲೂ ಈ ಸಮುದಾಯ ತನ್ನ ದಿಟ್ಟತನ, ಪ್ರತಿರೋಧವನ್ನು ಒಂದು ರಾಜಕೀಯ ಪ್ರಶ್ನೆಯಾಗಿ ಕೈಗೆತ್ತಿಕೊಳ್ಳುತ್ತಿರುವುದನ್ನು ವರದಿ ದಾಖಲಿಸುತ್ತದೆ.

ಭಾರತದಲ್ಲಿ ಲೈಂಗಿಕ ಅಲ್ಪಸಂಖ್ಯಾತರ ಚಳವಳಿ ಎರಡನೆ ದಶಕಕ್ಕೆ ಕಾಲಿಟ್ಟರೂ ಅದು ಸಲಿಂಗ, ದ್ವಿಲಿಂಗ ಕಾಮಿಗಳ ಹಕ್ಕುಗಳಿಗಷ್ಟೆ ಸೀಮಿತವಾಗಿದೆ. ಸಲಿಂಗ-ದ್ವಿಲಿಂಗ ಕಾಮಿಗಳಲ್ಲಿ ಅಂತರ ಲಿಂಗಿಯ ಸಮುದಾಯದ ವಿಚಾರಗಳನ್ನು ಕೈಗೆತ್ತುಕೊಳ್ಳಲು ಹಿಂಜರಿಕೆಯನ್ನು ತೋರಿಸಿದೆ. ಇದಕ್ಕೆ ಕಾರಣ ಹಿಜ್ರಾ ಹಾಗು ಕೋಥಿ ಸಮುದಾಯಗಳು ಯಾವುದೇ ರೂಡಿಗತ ಜೆಂಡರ್ ಪಾತ್ರಗಳನ್ನು ಒಪ್ಪದಿರುವುದು ಹಾಗು ಅವರು ಕೆಳವರ್ಗಕ್ಕೆ ಸೇರಿರುವುದರಿಂದ ಎಂದು ಹೇಳಬಹುದು. ಸಲಿಂಗ ಹಾಗೂ ದ್ವಿಲಿಂಗ ಕಾಮಿಗಳ ಚಳುವಳಿಯು, ಅಂತರ ಲಿಂಗೀಯ ಜನರನ್ನು ಹಾಗೂ ಸಲಿಂಗ, ದ್ವಿಲಿಂಗ ಕಾಮಿಗಳೆಂದು ಗುರುತಿಸಿಕೊಳ್ಳಬಯಸದ ಇತರ ಕಾಳಜಿಗಳನ್ನು ಕಡೆಗಣಿಸಿವೆ. ಈ ನಿರ್ಲಕ್ಷ್ಯದ ಮೂಲವಿರುವುದು ಹಿಜ್ರಾ ಸಮುದಾಯದ ಲಿಂಗ ಅನಿರ್ದಿಷ್ಟತೆಯ ಕಾರಣಕ್ಕೆ ತಾರತಮ್ಯ ಮಾಡುವ ಮುಖ್ಯವಾಹಿನಿ ಸಮಾಜದಲ್ಲಿ. ಈ ಹಿಂಜರಿಕೆಯನ್ನು ಇಂದು ಹಿಜ್ರಾ ಹಾಗೂ ಕೋಥಿ ಸಮುದಾಯಗಳು ಪ್ರಶ್ನಿಸುತ್ತಿವೆ. ತಮ್ಮನ್ನು ಲೈಂಗಿಕ ಅಲ್ಪಸಂಖ್ಯಾತರ ಚಳವಳಿಯ ಭಾಗವಾಗಿ ಪರಿಗಣಿಸಬೇಕೆಂಬುದಾಗಿ ಆಗ್ರಹಿಸುತ್ತಿದ್ದಾರೆ. ಇದು ಜಾಗತಿಕ ಮಟ್ಟದಲ್ಲಿ ಕ್ವಿಯರ್ ರಾಜಕೀಯವು ಲೈಂಗಿಕಾಭಿ ಮುಖತೆಯ ವಿಷಯಗಳಿಂದ ಲಿಂಗ ಅಸ್ಮಿತೆಯತ್ತ ಬದಲಾಗಿರುವುದನ್ನು ಸೂಚಿಸುತ್ತದೆ. ಜೆಂಡರ್ ಐಡೆಂಟಿಟಿ ವಿಚಾರಗಳತ್ತ ಸಾಗುತ್ತಿರವುದರ ರೂಪವೇ ಆಗಿದೆ. ಹೆಚ್.ಐ.ವಿ/ಏಡ್ಸ್ ಕುರಿತಂತೆ ಅಂತರರಾಷ್ಟ್ರೀಯಮಟ್ಟದಲ್ಲಿ ಆಗುತ್ತಿರುವ ಹೋರಾಟ, ಸಂವಾದ ಹಾಗು ಬೆಂಗಳೂರಿನಲ್ಲಿ ಹಲವಾರು ಗುಂಪುಗಳು, ಸಂಘ, ಸಂಘಟನೆಗಳ ಕೆಲಸಗಳ ಫಲವಾಗಿ ಹಿಜ್ರಾ ಸಮುದಾಯದ ಲೈಂಗಿಕತೆ ಹಾಗು ಮಾನವಹಕ್ಕುಗಳ ಬಗ್ಗೆ ಅವರ ಬದುಕು, ಹೋರಾಟಗಳ ಬಗ್ಗೆ ಎಲ್ಲೆಲ್ಲೂ ಕೇಳಬರುತ್ತಿದೆ. ಇದಲ್ಲದೆ ಹಲವಾರು ಹಿಜ್ರಾಗಳು ಶಿಕ್ಷಣ ಪಡೆದು, ಸಾಂಪ್ರದಾಯಿಕವಾಗಿ ಅವರು ಮಾಡುತ್ತಿದ್ದ ಉದ್ಯೋಗಗಳನ್ನು ಹೊರತುಪಡಿಸಿ ಸಮಾಜ ಸೇವೆ ರಾಜಕೀಯದ ಹಾದಿಗಳನ್ನು ಆರಿಸಿಕೊಳ್ಳುತ್ತಿರುವುದು ಇದಕ್ಕೆ ಕಾರಣವಿರಬಹುದು. ಇದರಿಂದ ಇವರ ವಿಚಾರಗಳು ಹೆಚ್ಚಾಗಿ ಕೇಳಬರುತ್ತದೆ. ಸಮಾಜದಲ್ಲಿ ಸಮುದಾಯದ ಬಗ್ಗೆ ಇರುವ ಧೋರಣೆಗಳ ಕಾರಣದಿಂದ ಸಮಾಜ ಅವರು ಅಂಚಿನಲ್ಲಿರುವಂತೆ, ಶೋಷಣೆಗೆ, ಅವಮಾನ ತಾರತಮ್ಯಕ್ಕೆ ಒಳಗಾಗುವಂತೆ ಮಾಡುತ್ತಿದೆ. ನಿಜವೇನೆಂದರೆ ಕೋಥಿ ಹಾಗು ಹಿಜ್ರಾ ಲೈಂಗಿಕ ಕಾರ್ಮಿಕರು ಹೆಚ್ಚು ಸಂಘಟಿತರಾಗದಂತೆ ಪೋಲಿಸರು ಹಾಗು ಸಮಾಜದಿಂದ ಅವರಿಗೆ ಮತ್ತಷ್ಟು ಶೋಷಣೆ ಹೆಚ್ಚಾಗುವಂತೆ ಆಗಿದೆ ಎಂಬುದನ್ನು ವರದಿ ತಿಳಿಸುತ್ತದೆ. ಈ ವರದಿಯು ತನ್ನ ಸಾಕ್ಷ್ಯಾಧಾರ ಹಾಗೂ ಸತ್ಯಕತೆಗಳ ಸತ್ವದಿಂದಾಗಿ ನಿರ್ದಿಷ್ಟವಾಗಿ ಕೋಥಿ ಹಾಗೂ ಹಿಜ್ರಾಗಳು, ಒಟ್ಟಾರೆಯಾಗಿ ಲೈಂಗಿಕತೆ ಅಲ್ಪಸಂಖ್ಯಾತರ ಹಕ್ಕುಗಳನ್ನು ಕುರಿತು ಅರಿವು, ಪ್ರಚಾರ, ಬೆಂಬಲಕ್ಕೆ ಸಹಾಯವಾಗಬಹುದೆಂಬ ಭರವಸೆ ನಮಗಿದೆ.

## 1.3 ವರದಿಯ ವಿಧಾನ ಕ್ರಮ

ಬೆಂಗಳೂರಿನಲ್ಲಿ ಹಿಜ್ರಾ ಹಾಗು ಕೋಥಿಗಳ ಮೇಲೆ ಪೋಲೀಸರಿಂದ ನಡೆಯುತ್ತಿರುವ ನಿರಂತರ ದಬ್ಬಾಳಿಕೆ, ಹಿಂಸೆಯ ದೂರುಗಳನ್ನು ಗಮನಿಸಿ, ಪಿ.ಯು.ಸಿ.ಎಲ್.-ಕರ್ನಾಟಕ, ಪಿ.ಡಿ.ಎಫ್, ಡಿಸ್ಕ್, ಪರ್ಯಾಯ ಕಾನೂನು ವೇದಿಕೆ, ಸಂಗಮ ಹಾಗು ವಿಮೋಚನಗಳಂತಹ ಮಾನವಹಕ್ಕುಗಳ ಸಂಸ್ಥೆ ಒಟ್ಟಿಗೆ ಸೇರಿ ಈ ರೀತಿಯ ಮಾನವ ಹಕ್ಕುಗಳ ಉಲ್ಲಂಘನೆಯನ್ನು ಕುರಿತು ಒಂದು ಸತ್ಯ ಶೋಧನಾ ವರದಿಯನ್ನು ಹೊರತರಲು ನಿರ್ಧರಿಸಿತು. ಈ ಸತ್ಯಶೋಧನ ಗುಂಪು ಈ ಸಮುದಾಯ ಅನುಭವಿಸುತ್ತಿರುವ ನೋವು, ಅನ್ಯಾಯಗಳನ್ನು ಸರಿಪಡಿಸುವಲ್ಲಿ ತೆಗೆದುಕೊಳ್ಳಬಹುದಾದ ಕ್ರಮಗಳ ಬಗ್ಗೆಯೂ ಕೆಲವು ಸಲಹೆಗಳನ್ನು ನೀಡುವ ಉದ್ಧೇಶವನ್ನು ಹೊಂದಿತ್ತು. (ಮಹಿಳಾ ಲೈಂಗಿಕ ಕಾರ್ಮಿಕರು ಪೋಲೀಸರಿಂದ ಇದೇ ರೀತಿಯ ದೌರ್ಜನ್ಯ ಹಾಗೂ ದ್ವೇಷಕ್ಕೆ ಒಳಗಾಗುತ್ತಾರೆ ಎಂಬುದನ್ನು ನಾವು ಗಮನಿಸಬೇಕು. ಹಾಗು ಅದನ್ನು ಕುರಿತಾದ ಸತ್ಯ ಶೋಧನೆಯನ್ನು ಸಧ್ಯದಲ್ಲಿ ಕೈಗೊಳ್ಳಲಾಗುತ್ತದೆ.)

ಅರವಿಂದ (ಎ.ಎಲ್.ಎಫ್.) ಮುದ್ದಪ್ಪ (ಡಿಸ್ಕ್) ಎನ್.ಬಾಬಯ್ಯ (ಪಿ.ಡಿ.ಎಫ್), ಫಮೀಲಾ (ಸಂಗಮ) ಹಾಗು ರಾಮದಾಸ್ ರಾವ್ (ಪಿ.ಯು.ಸಿ.ಎಲ್.-ಕೆ) ಇವರನ್ನೊಳಗೊಂಡ ಒಂದು ಸತ್ಯಶೋಧನಾ ಗುಂಪೊಂದನ್ನು ಪಿ.ಯು.ಸಿ.ಎಲ್.-ಕೆ ರಚಿಸಿತು. ಈ ಗುಂಪು ಸತ್ಯ ಶೋಧನೆಯನ್ನು ನಡೆಸಿ, ಅದರಿಂದ ಹೊರಬಂದ ವಿಚಾರಗಳನ್ನು ವರದಿಯ ರೂಪದಲ್ಲಿ ಹೊರತಂದು. ಮುಂದಾಗಬೇಕಾದ ಪ್ರಚಾರಾಂದೋಲನದ ಕಾರ್ಯಗಳನ್ನು ಸಂಯೋಜಿಸುವ ಜವಬ್ದಾರಿಯನ್ನು ಒಪ್ಪಿಕೊಂಡಿತು. 17 ಮಾರ್ಚ್ 2002ರಂದು ಈ ಗುಂಪು ಸುಮಾರು 30 ಕೋಥಿ ಹಾಗು ಹಿಜ್ರಾ ಲೈಂಗಿಕ ಕಾರ್ಮಿಕರನ್ನು ಒಟ್ಟಿಗೆ ತಂದು, ಅವರ ಅನುಭವಗಳನ್ನು ದಾಖಲಿಸಲು ಆರಂಭಿಸಿತು. ಇದಲ್ಲದೆ ಸಂಗಮ ಹಾಗು ವಿವಿಧಾದಲ್ಲಿ ಹಿಜ್ರಾ ಕೋಥಿಗಳೊಡನೆ ಒಂದು ಸಂದರ್ಶನ ಸರಣಿಯನ್ನು ಕೈಗೊಳ್ಳಲಾಯಿತು. ವಿವಿಧಾದ ಕಲವು ಸದಸ್ಯರು ತಮ್ಮ ಅನುಭವಗಳನ್ನು ಲಿಖಿತ ರೂಪದಲ್ಲಿ ಕೊಟ್ಟರು, ಅದನ್ನು ವರದಿಯಲ್ಲಿ ಸೇರಿಸಲಾಗಿದೆ.

3ನೇ ಅಧ್ಯಾಯದಲ್ಲಿ ಕೋಥಿ, ಹಿಜ್ರಾ ಲೈಂಗಿಕ ಕಾರ್ಮಿಕರ ಅನುಭವಗಳು, ಹಿಂಸೆ ಹಾಗು ಕಿರುಕುಳದ ದಾಖಲೆಗಳು ಸಂಗಮ ಮಾಡಿರುವಂತಹ ದಾಖಲೆಯನ್ನು ಆಧರಿಸಿದೆ. ಈ ರೀತಿಯ ದಾಖಲಾತಿಯು ಈ ವರದಿಯ ಕೇಂದ್ರ ಭಾಗವಾಗಿದ್ದು, ಇದನ್ನು ದೌರ್ಜನ್ಯಕ್ಕೊಳಗಾದ ಶೋಷಿತರು ಹಾಗು ಅವರೊಡನೆ ದಿನನಿತ್ಯ ಒಡನಾಡಿ ಕೆಲಸ ಮಾಡುವ ಕಾರ್ಯಕರ್ತರೊಡನೆ ಕುಳಿತು ಅನುಭವಗಳನ್ನು ದಾಖಲಿಸಲಾಯಿತು. ಕೆಲವೊಮ್ಮೆ ಅನುಭವಗಳನ್ನು ತಮಿಳು, ಕನ್ನಡ ಭಾಷೆಯಲ್ಲಿ ದಾಖಲಿಸಿ, ನಂತರ ಅವನ್ನು ಇಂಗ್ಲೀಷಿಗೆ ಅನುವಾದಿಸಲಾಯಿತು. ಇನ್ನು ಕೆಲವು ಸಂದರ್ಭಗಳಲ್ಲಿ ಬರೆಯುವುದಕ್ಕಿಂತ ಮಾತನಾಡಲು ಬಯಸಿದ ಹಿಜ್ರಾ ಹಾಗೂ ಕೋಥಿಗಳ ಅನುಭವಗಳನ್ನು ಸಂಗಮದ ಸಿಬ್ಬಂಧಿಯವರು ಬರಹದ ಸ್ವರೂಪಕ್ಕೆ ತಂದರು. ಇದಲ್ಲದೆ ಚೆನ್ನೈನ ಡಾ॥ ಸಿ.ವೆಂಕಟೇಶನ್ ಅವರೊಡನೆ ನಾವು ಇ-ಮೇಲ್ ಮುಖಾಂತರ ನಡೆಸಿದ ಸಂದರ್ಶನದಿಂದ, ಆರೋಗ್ಯ ವ್ಯವಸ್ಥೆ ಹೇಗೆ ಅಂತರಲಿಂಗೀಯ ಸಮುದಾಯವನ್ನು ನೋಡುತ್ತದೆ ಎಂದು ತಿಳಿದುಕೊಳ್ಳಲು ಬಹಳ

ಸಹಕಾರಿಯಾಯಿತು. ಈ ವಿಚಾರಗಳ ಬಗ್ಗೆ ಮಾಧ್ಯಮದಲ್ಲಿ ವರದಿಯಾದ ತುಣುಕುಗಳನ್ನು ಸಂಗಮದಿಂದ ಈ ವರದಿ ಪಡೆದುಕೊಂಡಿದೆ.

ವರದಿಯು ಹಿಜ್ರಾ ಹಾಗು ಕೋಥಿ ಲೈಂಗಿಕ ಕಾರ್ಮಿಕರೊಡನೆ ನಡೆಸಿದ ಸಂದರ್ಶನಗಳಲ್ಲಿ ಹಂಚಿಕೊಂಡಂತಹ ಸ್ವಂತ ಅನುಭವಗಳನ್ನು ದಾಖಲಿಸುತ್ತದೆ. ಪಿ.ಯು.ಸಿ.ಎಲ್.-ಕೆ 12 ಏಪ್ರಿಲ್ 200ರಂದು ಬೆಂಗಳೂರಲ್ಲಿ ಪತ್ರಿಕೆಗಳೊಡನೆ ನಡೆಸಿದ ಪತ್ರಿಕಾಗೋಷ್ಟಿಯಲ್ಲಿ ಹಿಜ್ರಾ, ಕೋಥಿ ಲೈಂಗಿಕ ಕಾರ್ಮಿಕರು ಹೇಳಿಕೊಂಡ ಅನುಭವಗಳು ಈ ವರದಿಯಲ್ಲಿನ ಸಂಗ್ರಹಕ್ಕೆ ಪುಷ್ಟಿ ನೀಡಿತು. ಈ ಗೋಷ್ಠಿಯನ್ನು ಕುರಿತು ಏಷಿಯನ್ ಏಜ್, ಜನವಾಹಿನಿ, ಸಂಯುಕ್ತ ಕರ್ನಾಟಕಗಳಂತಹ ಪತ್ರಿಕೆಗಳು ಒಳ್ಳೆಯ ವರದಿಯನ್ನು ಪ್ರಕಟಿಸಿದವು. ಈ ಪತ್ರಿಕಾ ಗೋಷ್ಠಿಯ ವರದಿಗಳನ್ನು ಇಲ್ಲಿ ತೆಗೆದುಕೊಳ್ಳಲಾಗಿದೆ.

ಈ ವರದಿಯು 2000ರಲ್ಲಿ ಪಿ.ಯು.ಸಿ.ಎಲ್-ಕೆ ಹೊರತಂದ **"ಭಾರತದ ಲೈಂಗಿಕ ಅಲ್ಪಸಂಖ್ಯಾತರ ಮೇಲೆ ನಡೆಯುತ್ತಿರುವ ಮಾನವ ಹಕ್ಕುಗಳ ಉಲ್ಲಂಘನೆ"** ವರದಿಯ ಮುಂದಿನ ಹೆಜ್ಜೆಯಾಗಿದೆ. ಈ ವರದಿಯು ಮುಖ್ಯವಾಗಿ ಹಿಜ್ರಾ ಮತ್ತು ಕೋಥಿ ಲೈಂಗಿಕ ಕಾರ್ಯಕರ್ತರ ಬದುಕನ್ನು ವಿಶೇಷವಾಗಿ ನೋಡುತ್ತದೆ. ಕಾರಣ ಇವರ ಬದುಕಿನ ಬಗ್ಗೆ ಯಾವುದೇ ಮಾಹಿತಿಗಳಿಲ್ಲ. ಕಳೆದ ವರದಿಯಲ್ಲಿ ಹಿಜ್ರಾ ಮತ್ತು ಕೋಥಿಗಳನ್ನು ಕುರಿತಾದ ಮಾಹಿತಿಯನ್ನು ಇಲ್ಲಿ ಉಪಯೋಗಿಸಲಾಗಿದ್ದು, ಮೊದಲ ವರದಿಯನ್ನು ಓದಿದವರು ಈ ವರದಿಯಲ್ಲಿ ಎಲ್ಲಾ ಮಾಹಿತಿಯನ್ನು ಪಡೆಯುತ್ತಾರೆ. ಅಂತರ ಲಿಂಗೀಯ ಸಮುದಾಯವನ್ನು ಪ್ರಜ್ಞಾಪೂರಕವಾಗಿ ಆಂಥ್ರೊಪಾಲಜಿ (ಮನುಷ್ಯ ವರ್ಣನಶಾಸ್ತ್ರ)ದ ಹಾಗು ಆರೋಗ್ಯ ವ್ಯವಸ್ಥೆಯ ದೃಷ್ಟಿಯಿಂದ ನೋಡದೆ, ಈ ಸಮುದಾಯವನ್ನು ಒಂದು ಸಂಸ್ಕೃತಿಯಾಗಿ, ಒಂದು ಚಳವಳಿಯಾಗಿ ಇಲ್ಲಿ ನೋಡಲಾಗಿದೆ. ಈ ವರದಿಯ ಉದ್ದೇಶ ಇವರ ಬದುಕನ್ನು ವೈಭವೀಕರಿಸುವುದಲ್ಲ, ಬದಲಿಗೆ ಇವರ ಕುರಿತಾದ ಮಾಹಿತಿಯನ್ನು ನೀಡಿ, ಸಮುದಾಯಕ್ಕೆ ಬೇಕಾದ ಅಂಗೀಕಾರ, ಗೌರವವನ್ನು ನೀಡವುದಾಗಿದೆ.

ಈ ವರದಿಯನ್ನು ಬೆಂಗಳೂರಿನಲ್ಲಿರುವ ಹಿಜ್ರಾ ಮತ್ತು ಕೋಥಿ ಸಮುದಾಯದ ಹೊರಗಿರುವ ಹಾಗು ಆ ಸಮುದಾಯದ ಜನರೊಂದಿಗೆ ಸೇರಿ ತಯಾರಿಸಲಾಗಿದೆ. ಅವರ ವಯಕ್ತಿಕ ಅನುಭವಗಳನ್ನು ಅವರ ಮಾತಿನಲ್ಲೆ ದಾಖಲಿಸಲಾಗಿದೆ. ಹೀಗೆ ಮಾಡುವುದರ ಮೂಲಕ ಈ ಸಮುದಾಯದವರಲ್ಲದವರು (ಅಂದರೆ ಇಲ್ಲಿ ಈ ವರದಿಗಾಗಿ ಕೆಲಸ ಮಾಡಿದ ಮಾನವಹಕ್ಕುಗಳು ಗುಂಪುಗಳ ಸದಸ್ಯರು) ತಮ್ಮ ವಿಶ್ಲೇಷಣೆಯನ್ನು ಹಿಜ್ರಾ ಮತ್ತು ಕೋಥಿ ಲೈಂಗಿಕ ಕಾರ್ಮಿಕರ ಪ್ರತಿನಿತ್ಯ ಬದುಕಿನ ಬಗ್ಗೆ ಅವರದೆ ಆಂತರಿಕ ವಿಶ್ಲೇಷಣೆಯನ್ನು ಆಧರಿಸುವಂತೆ ಮಾಡುವುದಾಗಿದೆ. ಇದಲ್ಲದೆ ಈ ವರದಿಯು ವೈದ್ಯರು ಹಾಗು ಲೈಂಗಿಕ ಅಲ್ಪಸಂಖ್ಯಾತರೊಡನೆ ಕೆಲಸ ಮಾಡುವ ಸ್ವಯಂ ಸೇವಾ ಸಂಸ್ಥೆಗಳ ಕಾರ್ಯಕರ್ತರೊಡನೆ ನಡೆಸಿದ ಸಂದರ್ಶನಗಳನ್ನು ಸೇರಿಸಿಕೊಂಡಿದ್ದಾರೆ. ಇದಲ್ಲದೆ ಇಂದು ಈ ಸಮುದಾಯದ ಹೋರಾಟಗಳನ್ನು ಒಂದು ಚಳವಳಿಯ ರೂಪಕ್ಕೆ ತರುವ ಪ್ರಯತ್ನವನ್ನು ಈ ವರದಿ ದಾಖಲಿಸುತ್ತದೆ. ಇದರಲ್ಲಿ ಈ ಸಮುದಾಯವನ್ನು ಕುರಿತ ಒಂದು ಸುದೀರ್ಘ ಸಂಪನ್ಮೂಲದ ಅನುಚ್ಛೇದವನ್ನು ಸೇರಿಸಲಾಗಿದೆ.

ವಯಕ್ತಿಕ ಅನುಭವಗಳ ಕಥನಗಳು, ಸಂದರ್ಶನಗಳು, ರಾಜಕೀಯ ಚರ್ಚೆಗಳು ಹಲವಾರು ಹುದುಗಿಹೋಗಿರುವ ವಿಚಾರಗಳನ್ನು ಬೆಳಕಿಗೆ ತಂದಿವೆ.

ಅನುಭವಗಳನ್ನು ಹೇಳಕೊಂಡ ಜನರ ಹೆಸಗನ್ನು ಪ್ರಕಟಿಸದೆ ಇರುವುದರ ಬಗ್ಗೆ ನಮ್ಮಲ್ಲಿ ದ್ವಂದ ಉಂಟಾಯಿತು. ಒಂದು ಕಡೆ ಕೆಲವರ ಗೌಪ್ಯತೆಯನ್ನು ಕಾಪಾಡಬೇಕಾಗಿತ್ತು., ಇನ್ನು ಕೆಲವರು ತಮ್ಮ ಹೆಸರನ್ನು ಮುಕ್ತವಾಗಿ ಹಾಕಬೇಕೆಂದು ಕೇಳ, ಸಮಾಜದೆದುರು ದಿಟ್ಟತನದಿಂದ ನಿಲ್ಲುವ ಧೈರ್ಯವನ್ನು ತೋರಿದರು. ಆದರೂ ಈ ವರದಿಯಿಂದ ಯಾವುದೇ ವ್ಯಕ್ತಿಗೆ ಕಿರುಕುಳ ಹೆಚ್ಚಾಗಬಾರದೆಂಬ ದೃಷ್ಟಿಯಿಂದ ಎಲ್ಲಾ ಹೆಸರುಗಳನ್ನು ಇಲ್ಲಿ ಬದಲಾಯಿಸಲಾಗಿದೆ. ಈ ವರದಿಯಲ್ಲಿ ನಾವು ಹಿಜ್ರಾ ಮತ್ತು ಕೋಥಿ ಎಂಬ ಪದಗಳನ್ನು ಭಾರತಕ್ಕೆ ನಿರ್ಧಿಷ್ಟವಾದ ವಿವಿಧ ರೀತಿಯ ಅಂತರಲಿಂಗೀಯ/ ಸಲಿಂಗಕಾಮಿ ಅನನ್ಯತೆಯನ್ನು ವಿವರಿಸುವ ಸಲುವಾಗಿ ಬಳಸಿದ್ದೇವೆ. ಪರಲಿಂಗೀಯ ರಚನೆಯನ್ನು ಪ್ರಶ್ನಿಸುವ ಎಲ್ಲ ಬಗೆಯ ಅನನ್ಯತೆಗಳನ್ನು ಉದ್ದೇಶಿಸಲು 'ಕ್ವಿಯರ್' ಎಂಬ ಪದವನ್ನು ಬಳಸಿದ್ದೇವೆ. ಲೆಸ್ಬಿಯನ್(ಸ್ತ್ರೀಸಲಿಂಗಕಾಮಿ) ಮತ್ತು ಗೇ(ಪುರುಷ ಸಲಿಂಗಕಾಮಿ) ರಾಜಕಾರಣದೊಂದಿಗಿನ ಅಸಮಧಾನದ ಹಾಗು ಪರಲಿಂಗೀಯತೆಯನ್ನು ಪ್ರಶ್ನಿಸುವ ವಿವಿಧ ದಾರಿಗಳನ್ನು ತೆಕ್ಕೆಗೆ ತೆಗೆದುಕೊಳ್ಳಬೇಕೆಂಬ ಹಿನ್ನೆಲೆಯಲ್ಲಿ 'ಕ್ವಿಯರ್' ಪದದ ಬಳಕೆ ಪ್ರಾರಂಭವಾಯಿತು. 'ಕ್ವಿಯರ್' ಎಂಬುದು ಇತರೆ ಚಳುವಳಿಗಳ ಕಾಳಜಿಗಳನ್ನು ಬೆಂಬಲಿಸುವಂತಹುದಾಗಿದೆ. ಅದು ವರ್ಣಬೇಧ, ಲಿಂಗತಾರತಮ್ಯ ವಿರೋಧಿಸುವಂತಹ ಚಳುವಳಿಯಾಗಿರಬಹುದು ಅಥವಾ ಉತ್ತಮ ಆರೋಗ್ಯ ವ್ಯವಸ್ಥೆಬೇಕೆಂಬ ಹೋರಾಟವಾಗಿರಬಹುದು. ಮೊದಲು 'ಕ್ವಿಯರ್' ಎಂಬ ಪದ ಲೈಂಗಿಕ ಅಲ್ಪಸಂಖ್ಯಾತರನ್ನು ಅವಮಾನಗೊಳಸಲು ಬಳಸುತ್ತಿದ್ದ ಪದವಾಗಿತ್ತು. ಆದರೆ ಇಂದು ಇದೇ ಪದ ಪರಲಿಂಗಕಾಮವನ್ನು ಪ್ರೋತ್ಸಾಹಿಸುವ ಎಲ್ಲಾ ಸಾಮಾಜಿಕ ಕಟ್ಟು ಪಾಡುಗಳನ್ನು ಪ್ರಶ್ನಿಸುವಂತಹ ಲೈಂಗಿಕ ಅಲ್ಪಸಂಖ್ಯಾತರ ಅನನ್ಯತೆಗಳನ್ನು ತನ್ನದಾಗಿಸಿಕೊಂಡಿದೆ. ಹೀಗಾಗಿ 'ಕ್ವಿಯರ್' ಎಂದಾಗ ಹಿಜ್ರಾ ಹಾಗು ಕೋಥಿ, ಡಬಲ್-ಡೆಕ್ಕರ್ಸ್ ಗಂಡು ಹಾಗು ಹೆಣ್ಣು ಸಲಿಂಗ ಕಾಮಿಗಳು, ದ್ವಿಲಿಂಗ ಕಾಮಿಗಳು ಅಂತರ ಲಿಂಗೀಯರು ಎಲ್ಲರನ್ನು ಒಳಗೊಳ್ಳುತ್ತದೆ. ಹಲವಾರು ನೆಲೆಗಳಿಂದ ಪರಲಿಂಗ ಕಾಮದ ಸಾಮಾಜಿಕ ಶ್ರೇಣಿಯವರನ್ನು ಪ್ರಶ್ನಿಸುವ ಜನರು ತಮ್ಮನ್ನು 'ಕ್ವಿಯರ್' ಎಂದು ಇಂದು ಕರೆದುಕೊಳ್ಳುತ್ತಿದ್ದಾರೆ.

# ಹಿಜ್ರಾ ಹಾಗೂ ಕೋಥಿಗಳ ಸಾಮಾಜಿಕ, ಸಾಂಸ್ಕೃತಿಕ ಹಾಗು ರಾಜಕೀಯ ಸಂದರ್ಭ

ಈ ಅಧ್ಯಾಯದಲ್ಲ ಹಿಜ್ರಾ ಹಾಗು ಕೋಥಿಗಳನ್ನು*** ಭಾರತದ ಸಮಾಜ ಹಾಗು ಸಂಸ್ಕೃತಿಯ ಹಿನ್ನೆಲೆಯಲ್ಲಿ ಒಂದು ಸಮುದಾಯವಾಗಿ ಅರ್ಥ ಮಾಡಿಕೊಳ್ಳಲು ಪ್ರಯತ್ನಸಲಾಗಿದೆ. ಭಾರತದೊಳಗಿರುವ ಹಾಗು ಬೇರೆಡೆ ಹಲವಾರು ಸಾಂಪ್ರದಾಯಿಕ ಸಮಾಜಗಳಲ್ಲಿ ಅವರ ಸ್ಥಾನಮಾನ, ಅವರು ಮೂಲೆಗುಂಪಾಗಲು ವರ್ಗ, ಲೈಂಗಿಕತೆ ಹಾಗು ಜೆಂಡರ್ ಹೇಗೆ ಕಾರಣವೆಂದು ಇಲ್ಲಿ ವಿವರಿಸಲಾಗಿದೆ.

*2.1 ಅಂತರಲಿಂಗೀಯ ಸಮುದಾಯ : ಒಂದು ಐತಿಹಾಸಿಕ ಹಿನ್ನೆಲೆ*

ಜೈವಿಕವಾಗಿ ಹುಟ್ಟಿದಾಗ ಪಡೆಯುವ ಲಿಂಗ (ಹೆಣ್ಣು-ಗಂಡೆಂದು ಗುರುತಿಸಲು ಜನನಾಂಗವನ್ನು ಆಧರಿಸಿ ಹೇಳಲಾಗುವ)ಕ್ಕೂ, ಬೆಳೆಯುತ್ತಾ ಪಡೆಯುವ 'ಜೆಂಡರ್' (ಸಾಮಾಜಿಕವಾಗಿ ಗಂಡೆಂದರೆ ಹೀಗೆ, ಹೆಣ್ಣೆಂದರೆ ಹೀಗೆ ಎಂದು ಸ್ವಭಾವ, ಸಾಮಾಜಿಕ ಪಾತ್ರಗಳನ್ನು ಗುರುತಿಸುವ) ಹಣೆ ಪಟ್ಟಿ ಹಾಗು ಲೈಂಗಿಕ ಒಲವಿಗೂ 'ಸಾಮಾನ್ಯ'ವಾಗಿ ಕಾಣುವ ಸಂಬಂಧ'ವನ್ನು ಅಂತರಲಿಂಗೀಯದಲ್ಲಿ ಕಾಣದಿರುವುದನ್ನು ನೋಡುತ್ತೇವೆ. ಹೀಗಾಗಿ ಅಂತರಲಿಂಗೀಯರನ್ನು ಮನುಷ್ಯರಾಗಿ, ಆದರೆ ಅವರ ಲೈಂಗಿಕತೆ ಮೇಲೆ ಹೇಳಿದ 'ಸಾಮಾನ್ಯ' ಗುಂಪಿಗಿಂತ ಸಂಕೀರ್ಣವಾದ, ಅದನ್ನು ಮೀರಿದ ಇನ್ನೊಂದು ಲೈಂಗಿಕತೆ ಎಂದು ಅರ್ಥ ಮಾಡಿಕೊಳ್ಳಲು ಸಮಾಜ ವಿಫಲವಾಗುತ್ತದೆ. ಹೀಗಾಗಿ ಜೈವಿಕವಾಗಿ 'ಗಂಡಾಗಿ ಹುಟ್ಟಿದವನನ್ನು 'ಗಂಡಸುತ'ವನ್ನು ಬಿಂಬಿಸುವ ಸ್ವಭಾವ, ಹಾವ-ಭಾವವನ್ನು ಹೊಂದಿದ್ದು, ಒಂದು ಹೆಣ್ಣಿಗೆ ಲೈಂಗಿಕವಾಗಿ ಆಕರ್ಷಿತನಾಗಬೇಕೆಂದು ನಿರೀಕ್ಷಿಸಲಾಗುತ್ತದೆ. ಆದರೆ, ಅಂತರಲಿಂಗೀಯ ವ್ಯಕ್ತಿಯೊಬ್ಬ ಜೈವಿಕವಾಗಿ ಗಂಡಾಗಿ ಹುಟ್ಟಿದರೂ ಇನ್ನೊಂದು ಲಿಂಗದ ಐಡೆಂಟಿಟಿಯನ್ನು ಹೊಂದಿರುತ್ತಾನೆ. ಒಮ್ಮೊಮ್ಮೆ ಒಬ್ಬ ಅಂತರಲಿಂಗೀಯ ವ್ಯಕ್ತಿ ತಾನು ಜೈವಿಕವಾಗಿ ಗಂಡಿನಿಂದ ಹೆಣ್ಣಾಗಲು ಶಸ್ತ್ರ ಚಿಕಿತ್ಸೆ ಮಾಡಿಸಿಕೊಳ್ಳಲು ಇಚ್ಛಿಸಬಹುದು. ಮೇಲೆ ನೀಡಿರುವ ವಿವರಣೆ ಕೂಡ ಅಂತರಲಿಂಗೀಯ ಜನರ ಸ್ವಭಾವ, ಐಡೆಂಟಿಟಿಗಳನ್ನು ಸಮಗ್ರವಾಗಿ ವಿವರಿಸುವುದಿಲ್ಲ ಎಂದು ನಾವು ನೆನಪಲ್ಲಿಡಬೇಕು.

ಅಂತರಲಿಂಗೀಯ/ಸಲಿಂಗ ಸಮುದಾಯಗಳು ಜಗತ್ತಿನ ಎಲ್ಲಾ ಭಾಗಗಳಲ್ಲಿ ತಮ್ಮದೇ ಆದ ಐಡೆಂಟಿಟಿ, ರೀತಿ-ರಿವಾಜುಗಳನ್ನು ಇಟ್ಟುಕೊಂಡು ಬದುಕುತ್ತಾ ಬಂದಿದೆ. ಫಿಲಿಪೈನ್ಸ್ ಅಲ್ಲಿ 'ಬಕ್ಲಾ' ಎಂದು, ಅಮೇರಿಕಾದ ಆದಿವಾಸಿಗಳಲ್ಲಿ 'ಒರ್ದಾಕೇಸ್' ಎಂದು, ಒಮಾನಲ್ಲಿ 'ಜಾನಿಕ್ಸ್'ಗಳೆಂದು ಆಫ್ರಿಕಾದಲ್ಲಿ 'ಸೆರರ್ಸ್' ಹಾಗು ದಕ್ಷಿಣ ಏಷ್ಯಾದಲ್ಲಿ 'ಹಿಜ್ರಾ' ಜೋಗಪ್ಪ, 'ಜೋಗತಿ'

'ಶಿವಶಕ್ತಿ'ಗಳೆಂದು ಕರೆಸಿಕೊಳ್ಳುತ್ತಾರೆ. ಲೈಂಗಿಕತೆ ಅಥವಾ ಲಿಂಗ ಅಸ್ಮಿತೆ ಕುರಿತ ಅಂತರಲಿಂಗೀಯ ಅಭಿವ್ಯಕ್ತಿಯನ್ನು ಮುಖ್ಯವಾಹಿನಿ ಸಮಾಜವು ಸಾಮಾನ್ಯವಾಗಿ ಕಳಂಕಿತಗೊಳಿಸಿದೆ ಇಲ್ಲವೆ ಮುಚ್ಚಿ ಹಾಕಿದೆ. ಇಂತಹ ತಾರತಮ್ಯ, ಕಳಂಕದ ವಿರುದ್ಧ ಅಂತರಲಿಂಗೀಯ ಸಮಾಜ ಒಂದು ಸುಧೀರ್ಘ ಹೋರಾಟವನ್ನೇ ನಡೆಸುತ್ತಾ ಬಂದಿದೆ. ಸಮಾಜದಲ್ಲಿ ಬದುಕುಳಿಯುವ ಪ್ರಯತ್ನಗಳನ್ನು ಮಾಡುತ್ತಲೇ ಬಂದಿದೆ. ಐತಿಹಾಸಿಕವಾಗಿ ಅಂತರಲಿಂಗೀಯ ಸಮುದಾಯಗಳು ಜಗತ್ತಿನೆಲ್ಲೆಡೆ ವಿವಿಧ ವಿಧಿ-ವಿಧಾನ, ಜಾನಪದ, ಪುರಾಣಗಳನ್ನು ಅಳವಡಿಸಿಕೊಳ್ಳುವ ಮೂಲಕ (ಹಲವು ಹಂತಗಳಲ್ಲಿ ಇದು ಸಫಲವಾಗಿದೆ) ತಮ್ಮದೇ ಒಂದು ಛಾಪನ್ನು ಸಾಂಪ್ರಾದಾಯಿಕ ಸಮಾಜಗಳಲ್ಲಿ ಕಂಡುಕೊಂಡಿದೆ. ಹೀಗಾಗಿ ಸಾಂಪ್ರದಾಯಿಕ ಸಮಾಜದಲ್ಲಿ ಈ ಸಮುದಾಯದ ಸ್ಥಾನ-ಮಾನಗಳು ಆ ಸಮಾಜದ ಸಾಮಾಜಿಕ ವ್ಯವಸ್ಥೆ, ಅಧಿಕಾರ ಶ್ರೇಣಿಕರಣವನ್ನು ಆಧರಿಸಿ ಎಷ್ಟರ ಮಟ್ಟಿಗೆ ರೂಢಿಬದ್ಧ ಪಾತ್ರಗಳಿಂದ ತಪ್ಪಿಸಿಕೊಳ್ಳುತ್ತಾರೆಂದು ನಾವು ನಿರ್ದಿಷ್ಟವಾಗಿ ಹೇಳಲಾಗದು.

ಶಿಶ್ನವನ್ನು ತೆಗೆಸಿಕೊಳ್ಳುವ ಕಾರಣಕ್ಕೆ ಅವರು ಗೌರವವನ್ನು ಪಡೆದುಕೊಂಡಿದ್ದಾರೆ ಅನಮಾನಿತರೂ ಆಗಿದ್ದಾರೆ. ಹಲವರು ಸಮಾಜದಲ್ಲಿ ಬೇರೂರಿದ್ದ 'ಶಿಖಂಡಿ' ಸಂಸ್ಕೃತಿಯ ಭಾಗವಾಗಿದ್ದಾರೆ. ಮಧ್ಯ ಪೂರ್ವರಾಷ್ಟ್ರಗಳಲ್ಲಿ ಅರಮನೆಗಳಲ್ಲಿ ಅವರಿಗೆ ವಿಶೇಷ ಸ್ಥಾನವಿತ್ತು. ಉದಾಹರಣೆಗೆ ಜನಾನಗಳಲ್ಲಿ ಪುರುಷರ ಬದಲಿಗೆ, ಮಹಿಳೆಯರನ್ನು ಕುರಿತು ಲೈಂಗಿಕ ಆಸಕ್ತಿ ಇಲ್ಲದವರೆಂಬ ಕಾರಣಕ್ಕೆ ಅವರನ್ನು ಕಾವಲುಗಾರರನ್ನಾಗಿ ನೇಮಿಸಿಕೊಳ್ಳುತ್ತಿದ್ದರು.

ಭಾರತದಲ್ಲಿ ಮುಖ್ಯವಾಹಿನಿ ಸಮಾಜ ಅಂತರಲಿಂಗೀಯ ಸಮುದಾಯಕ್ಕೆ ತನ್ನದೇ ಆದ ಇತಿಹಾಸಗಳು, ಸಂಪ್ರದಾಯಗಳಿವೆ ಎಂದು ಒಪ್ಪುವುದಿಲ್ಲ. ಆದರೆ ಈ ಮೇಲೆ ಹೇಳಿದ ವಿಚಾರಗಳನ್ನು ಮುಖ್ಯವಾಹಿನಿ ಸಮಾಜ ಹಾಗು ಸಂಸ್ಥೆಗಳನ್ನು ಗಣನೆಗೆ ತೆಗೆದುಕೊಳ್ಳಬೇಕಾಗುತ್ತದೆ.

ಹಲವಾರು ಸಂಸ್ಕೃತಿಗಳಲ್ಲಿ, ಅಂತರ ಲಿಂಗೀಯರಿಗೆ 3ನೇ ಲಿಂಗ'ದ ಸ್ಥಾನವಿರುವ ಕಾರಣ ವಿಶೇಷ ಅಧಿಕಾರವನ್ನು ನೀಡಲಾಗಿದೆ. ಹಾಗು ಕೆಲವು ಧಾರ್ಮಿಕ ಆಚರಣೆಯಲ್ಲಿ ಇವರು ಭಾಗವಹಿಸಲು ಅದು ಒಪ್ಪಿಕೊಳ್ಳುವುದು ಅವರನ್ನು ಸಹಿಸಿಕೊಂಡು, ಅವರ ಬೇರೆ ಉದ್ಯೋಗ (ಲೈಂಗಿಕ ಕಾರ್ಮಿಕರಾಗಿ)ದಲ್ಲಿರಲು, ಹಮಾಮ್‌ಗಳಲ್ಲಿ ವಾಸಿಸಲು, ಬೇರೆ ಲಿಂಗ ವೇಷಭೂಷಣ ತೊಡಲು, ಅಂತರಲಿಂಗೀಯ ಸ್ವಭಾವವನ್ನು ಪ್ರವೇಶಿಸಲು ಅದು ಬಿಟ್ಟು ಬಿಡುತ್ತಿದ್ದರು. ಆದರೆ ಬೇರೆ ಉದ್ಯೋಗಗಳಿಂದ, ಸಮುದಾಯದ ಆಚರಣೆಗಳಿಂದ ಅವರನ್ನು ದೂರವಿಡುತ್ತಿದ್ದರು. ಅವರನ್ನು ಗುಲಾಮರನ್ನಾಗಿ ಮಾರುತ್ತಿದ್ದರು.

### *2.2 ಹಿಜ್ರಾ ಹಾಗೂ ಕೋಥಿಗಳು : ಭಾರತೀಯ ಸಂದರ್ಭದಲ್ಲಿ*

ಬೆಂಗಳೂರಿನ ಹಿಜ್ರಾಗಳ ಒಂದು ಗುಂಪು ನಮ್ಮ ಗುಂಪಿನೊಡನೆ ತಮ್ಮ ಅನುಭವಗಳನ್ನು, ಅವರ ಸಂಸ್ಕೃತಿಯ ಬಗ್ಗೆ ಒಳನೋಟಗಳನ್ನು ಸಂತೋಷದಿಂದ ಹಂಚಿಕೊಂಡರು. ಈ ಕೆಳಗಿನ ವಿವರಗಳು ಅವರು ನಮ್ಮೊಡನೆ ಹಂಚಿಕೊಂಡ ಸಂಗತಿಗಳಾಗಿವೆ.

**ಹಿಜ್ರಾ ಸಂಸ್ಕೃತಿ**

ಭಾರತದ ಹಿಜ್ರಾಗಳು (ಅರೇಬಿಕ್ ಭಾಷೆಯಲ್ಲಿ ಹಿಜ್ರಾ ಅಂದರೆ ಪವಿತ್ರ. ಇದು ಉರ್ದುವಿನ

'ಇಜ್ರಾ' ಎಂಬ ಪದದಿಂದ ಉಗಮವಾಗಿರ ಬಹುದು. ಇಜ್ರಾ ಅಂದರೆ ಅಲೆಮಾರಿ ಎಂದರ್ಥ.) ಮೂರನೆ ಲಿಂಗವೆಂಬ ಕಾರಣಕ್ಕೆ ನಮ್ಮ ಸಂಸ್ಕೃತಿಯಲ್ಲೊಂದು ಪವಿತ್ರ ಸ್ಥಾನವನ್ನು ಗುರುತಿಸಿಕೊಂಡಿದ್ದಾರೆ. ಮೂರನೆ ಲಿಂಗವನ್ನು ಸಂಸ್ಕೃತದಲ್ಲಿ ಪಿಂಗಳ ಎಂದು ಕರೆಯಲಾಗುತ್ತದೆ. 'ಶಿವಶಕ್ತಿ ಎಂದೂ ಹೆಸರು ವಾಸಿ. ಈ ದೇವರಿಗೆ ಆಯಸ್ಸು, ರೂಪ, ಲಿಂಗದ ಪರಿಮಿತಿಗಳಿಲ್ಲದಂತೆ ಚಿತ್ರಿಸಲಾಗುತ್ತದೆ. ಬೇರೆ ಸಮುದಾಯಗಳಂತೆ ಹಿಜ್ರಾಗಳು ತಮ್ಮ ಉಗಮವನ್ನು ರಾಮಾಯಣ, ಮಹಾಭಾರತದಲ್ಲಿ ಗುರುತಿಸಿಕೊಳ್ಳುತ್ತಾರೆ. ರಾಮಾಯಣದಲ್ಲಿ ರಾಮನಿಗೆ 14ವರ್ಷಗಳ ವನವಾಸದ ಪ್ರಕರಣದ ಸಂದರ್ಭದಲ್ಲಿ ಹಿಜ್ರಾಗಳು ಕಾಣಿಸಿಕೊಳ್ಳುತ್ತಾರೆ. ಅವನು ಕಾಡಿಗೆ ಹೊರಡುವಾಗ, ಹಿಂತಿರುಗಿ ನೋಡುವಾಗ ಅವನ ಹಿಂದೆ ಇದ್ದ ಜನಸ್ತೋಮವನ್ನೇ ನೋಡುತ್ತಾನೆ. ರಾಮ, ಪುರುಷ, ಸ್ತ್ರೀಯರೆಲ್ಲಾ ನಿಮ್ಮ ಮನೆಗೆ ತೆರಳಿ' ಎಂದಾಗ ಎರಡಕ್ಕೂ ಸೇರದ ಹಿಜ್ರಾಗಳು ಅವನೊಡನೆ ಹೊರಡುತ್ತೇವೆ ಎನ್ನುತ್ತಾರೆ. ಅವರ ಭಕ್ತಿಗೆ ಮೆಚ್ಚಿದ ರಾಮ ಅವರಿಗೆ ಆರ್ಶಿವಾದದ ವಿಶೇಷ ಶಕ್ತಿ ನೀಡಿ, ವಿಶೇಷ ಸಮಾರಂಭಗಳಾದ ನಾಮಕರಣ, ಮದುವೆ ಹಾಗು ಇನ್ನಿತರೆ ದಿನಗಳಲ್ಲಿ ಆರ್ಶೀವಾದ ನೀಡುವ ಸ್ಥಾನವನ್ನು ನೀಡುತ್ತಾನೆ. ಹೀಗಾಗಿ 'ಬದಾಯಿ'ಗಳಲ್ಲಿ ಹಿಜ್ರಾಗಳು ಹಾಡಿ, ಕುಣಿದು ಹರಿಸುತ್ತಾರೆ.

ಮಹಾಭಾರತದಲ್ಲಿ ಮತ್ತೊಂದು ಪುರಾಣ ಕಥೆಯಿದೆ. ಆ ಕಥೆ ಅರ್ಜುನ ಹಾಗೂ ನಾಗಕನ್ಯೆಯ ಮಗ ಅರವಣನನ್ನು ಕುರಿತದ್ದು. ದ್ವೇಷ ತೀರಿಸಲು ಪಣತೊಟ್ಟಿದ್ದ ಭೀಷ್ಮನನ್ನು ಎದುರಿಸಿ, ಸಾಯಲು ಅರವಣ, ಒಂದು ಷರತ್ತಿನ ಮೇಲೆ ಸಿದ್ಧನಾಗುತ್ತಾನೆ. ಅದೇನೆಂದರೆ ತನ್ನ ಜೀವನದ ಕೊನೆಯ ರಾತ್ರಿಯನ್ನು ಮದುಮಗನಾಗಿ ಕಳೆಯಲು ಬಯಸುತ್ತಾನೆ. ಯಾರೂ ಮದುವೆಯಾಗಲೂ ಬಯಸದಿದ್ದರಿಂದ ಕೃಷ್ಣನೆ ಮೋಹಿನಿ ಎಂಬ ಹೆಣ್ಣಿನ ರೂಪ ತಳೆದು ಮದುವೆಯಾಗುತ್ತಾನೆ. ತಮಿಳು ನಾಡಿನ ಹಿಜ್ರಾಗಳು ಹೆಣ್ಣುತನದ ಸಲಿಂಗ ಕಾಮಿಗಳು, ಅವರು ಅರವಣನ್ನು ಮೂಲ ಪುರುಷನೆಂದು ಪರಿಗಣಿಸಿಕೊಂಡು ತಮ್ಮನ್ನು ತಾವು ಅರವಣಿಯರೆಂದು ಕರೆದುಕೊಳ್ಳುತ್ತಾನೆ.

ಇನ್ನೊಂದು ಪುರಾಣದ ಕಥೆಯಲ್ಲಿ ಗುಜರಾತಿನ ರಾಜನೊಬ್ಬ ನವಿಲನ್ನು ಏರಿದ ದೇವತೆಯಾದ ಬಹುಚಾರಿಮಿತಳೆಂಬುವಳಲ್ಲಿ ಅನುರಕ್ತನಾಗುತ್ತಾನೆ. ಆತ ಅವಳನ್ನು ಮದುವೆಯಾಗಲು ಇಷ್ಟ ಪಡುತ್ತಾನೆ. ಆದರೆ ಆಕೆಗೆ ಕನ್ಯೆಯಾಗಿ ಇರುವ ಆಸೆ. ಅವಳನ್ನು ಎಷ್ಟೇ ಒತ್ತಾಯಿಸಿದರೆ ಮಣಿಯುವುದಿಲ್ಲ. ಅವಳು ಮೊದಲು ಆತ ಕೊಳ ಒಂದರಲ್ಲಿ ಸ್ನಾನ ಮಾಡುವಂತೆ ಕೇಳುತ್ತಾಳೆ. ಸ್ನಾನದಿಂದ ಹೊರಬಂದ ಅವನು ತನ್ನ ಗಂಡಸುತನವನ್ನು ಕಳೆದುಕೊಂಡಿರುತ್ತಾನೆ. ಅವಳೊಂದಿಗೆ ಸೇರಲು ಅವನಿಗೆ ಸಾಧ್ಯವಾಗುವುದಿಲ್ಲ. ಆಗ ದಿಗ್ಭ್ರಮೆಗೊಂಡ ಅವನನ್ನು ಸಮಾಧಾನ ಪಡಿಸಿ ದೇವತೆ ಅವನ ನೆನಪಲ್ಲಿ ಒಂದು ಸಮುದಾಯ ಸ್ವ ಇಚ್ಛೆಯಿಂದ ಗಂಡಸುತನವನ್ನು ತ್ಯಜಿಸುತ್ತಾರೆಂದು ಹೇಳುತ್ತಾಳೆ.

ಹೀಗೆ ಇನ್ನಿತರ ಹಿಂದೂ ಪುರಾಣಗಳು ಹಿಜ್ರಾಗಳಿಗೆ ಈ ಸಮಾಜದಲ್ಲಿ ಒಪ್ಪಿಕೊಂಡಂತಹ ಪಾತ್ರಗಳಿದ್ದವು ಎಂದು ತೋರಿಸುತ್ತವೆ. ಅದರಲ್ಲೂ ಬದಾಯಿಗಳಂತಹ ಆಚರಣೆಗಳು ಇದಕ್ಕೆ ಉದಾಹರಣೆ. ಇದು ಹೆಚ್ಚಾಗಿ ಉತ್ತರ ಭಾರತದಲ್ಲಿ ಪ್ರಚಲಿತವಾಗಿದೆ. ದಕ್ಷಿಣ ಭಾರತದಲ್ಲಿ ಜೋಗಪ್ಪ, ಜೋಗಮ್ಮ, ಶಿವಶಕ್ತಿಗಳಂತಹ ರೂಪದಲ್ಲಿ ಅವರಿಗೆ ಆಚರಣೆಗಳಲ್ಲಿ ಸ್ಥಾನವಿದೆ. ಕರಗ ಮುಂತಾದ ಮೆರವಣಿಗೆ, ಜಾತ್ರೆಗಳಲ್ಲಿ ಅವರು ಹೆಂಗಸರಂತೆ ಅಲಂಕರಿಸಿಕೊಂಡ ಗಂಡಸರೊಡನೆ ಕಾಣಿಸುತ್ತಾರೆ. ಆದರೆ ದಕ್ಷಿಣ ಭಾತದ ಹಿಜ್ರಾಗಳಿಗೆ ಆಚರಣೆಗಳಲ್ಲಿ ಕಡಿಮೆ ಪಾತ್ರವಿದೆ. ನಮ್ಮೊಡನೆ ಮಾತನಾಡುತ್ತಾ ದಕ್ಷಿಣ ಭಾರತದಲ್ಲಿ (ಹೈದರಾಬಾದೊಂದನ್ನು ಬಿಟ್ಟು) ಉತ್ತರ ಭಾರತದಲ್ಲಿದ್ದಂತೆ

ಹಿಜ್ರಾಗಳಿಗೆ ಪಾತ್ರವಿಲ್ಲದ ಕಾರಣ ಲೈಂಗಿಕಕಾರ್ಮಿಕರಾಗಿ ಹಮಾಮ್‌ಗಳಲ್ಲಿ ಸೇರಬೇಕಾಗುತ್ತದೆ ಎಂದು ತಿಳಿಸಿದರು. ಇದು ತೀರಾ ಅಪಾಯಕಾರಿ ಕೆಲಸ. ಏಕೆಂದರೆ ಗಿರಾಕಿಗಳು ಹಾಗು ಪೊಲೀಸರಿಂದ ಅವರು ಸಾಕಷ್ಟು ಕಷ್ಟಗಳನ್ನು ಅನುಭವಿಸಬೇಕಾಗುತ್ತದೆ.

ಭಾರತದಲ್ಲಿರುವ ಹಿಜ್ರಾಗಳು ಗುಂಪಾಗಿ ವಾಸಿಸುತ್ತಾರೆ. ಹಾಗು ಮುಂಬೈ, ಪೂಣೆ, ಹೈದರಾಬಾದ್‌ಗೆ ಸೇರಿದ 'ಘರನಾ'ಗಳಿಗೆ ಸೇರಿರುತ್ತಾರೆ. ಪ್ರತಿ ಗಂಡಿಗೂ ಒಬ್ಬ ಮುಖ್ಯಸ್ಥರಾದ 'ನಾಯಕ್' ಇರುತ್ತಾರೆ. ಅವರು ಗುರುಗಳನ್ನು, ಆದ್ಯಾತ್ಮಿಕ ಮುಖ್ಯಸ್ಥರನ್ನು ಗುರುತಿಸುತ್ತಾರೆ. ಇವರು 'ಚೇಲಾ'ಗಳಿಗೆ 'ಬದಾಯಿ'ಗಳಲ್ಲಿ ಹಾಡಲು, ಕುಣಿಯಲು, ಹರಸಲು ತರಬೇತಿ ನೀಡಿ ಸಮುದಾಯದ ಒಳಗೆ, ಹೊರಗೆ ಸಾರ್ವತ್ರಿಕಾಗಿರುವಂತೆ ಸಂರಕ್ಷಿಸುತ್ತಾರೆ. ಮಾತೃ ಕೇಂದ್ರಿತ ಸಮುದಾಯಗಳಂತೆ ಇಲ್ಲ ವಯಸ್ಸಾಗುತ್ತಿರುವ ಗುರುವಿಗೂ, ತನ್ನ ಕುಟುಂಬದಿಂದ ಹೊರಬಂದ 'ಚೇಲಾ'ಗೂ ಅಂತರ ಅವಲಂಬಿತವಾಗುವಂತೆ ಮಾಡುತ್ತದೆ. ಹಿಜ್ರಾಗಳ ಒಳ ಜಗಳವೇನೇ ಇದ್ದರೂ ಅದನ್ನು 'ನಾಯಕ್', ಹಿರಿಯ ಗುರುಗಳು ತಮ್ಮದೇ ಕಾನೂನು, ರೀತಿ-ನೀತಿಗಳ ಮೂಲಕ ನ್ಯಾಯ ಮಾಡುತ್ತಾರೆ. ಶಿಕ್ಷೆಯ ರೂಪದಲ್ಲಿ ದಂಡ ಕಟ್ಟುವುದು, ಬಹಿಷ್ಕಾರ ಹಾಕುವುದನ್ನು ನಿರ್ಧರಿಸುತ್ತಾರೆ.

ಅವರಿಗೆ ತಮ್ಮದೇ ಆದ ನಿಷೇದಗಳು, ಕಟ್ಟು ಪಾಡುಗಳಿವೆ. ಹಿಜ್ರಾ ಆಗಲು ಬಯಸಿದ ವ್ಯಕ್ತಿ ಒಂದು ವರ್ಷ 'ಸಟ್ಲಾ'ದಲ್ಲಿ ಬದುಕಿ (ಅಂದರೆ ಸೀರೆ ಉಟ್ಟು), ಸಮುದಾಯದ ಆಚರಣೆಗಳನ್ನು ಪಾಲಿಸಬೇಕು. ಉದಾಹರಣೆಗೆ ಗುರಿವಿನೊಂದಿಗೆ ಮನೆಯನ್ನು ನಡೆಸಲು ಖರ್ಚುವೆಚ್ಚಗಳನ್ನು ಹಂಚಿಕೊಳ್ಳಬೇಕು. ಸಾಮುದಾಯಿಕ ಬದುಕಿಗೆ ಅಳವಡಿಸಿಕೊಳ್ಳಲು ಅಸಾಧ್ಯವಾದರೆ ಅವರಿಗೆ ನಿರ್ವಾಣ (ಜನನಾಂಗವನ್ನು ತೆಗೆದು ಹಾಕುವುದು) ನೀಡುವುದಿಲ್ಲ. ನಿರ್ವಾಣ ಕೋಥಿಗಳಿಗೆ ಹೆಚ್ಚು ಪ್ರಾಮುಖ್ಯತೆ. ಈ ಆಚರಣೆಯಲ್ಲಿ ಶಿಶ್ನವನ್ನು ಹಾಗು ಟೆಸ್ಟಕಲ್ಸ್ ಗಳನ್ನು ತೆಗೆದು ಹಾಕಲಾಗುತ್ತದೆ. ಹೀಗೆ ನಿರ್ವಾಣಗಳಿಸದ ಕೋಥಿಗಳನ್ನು ಆಕ್ವ/ಜೆನಾನವೆಂದು ಕರೆಯುತ್ತಾರೆ. ಬಹಳಷ್ಟು ಹಿಜ್ರಾಗಳು ಜೈವಿಕವಾಗಿ ಗಂಡಾಗಿ ಹುಟ್ಟುತ್ತಾರೆ. ಕೆಲವರು ಮಾತ್ರ ಎರಡೂ ಲಿಂಗದ ಜನನಾಂಗದೊಂದಿಗೆ ಹುಟ್ಟುತ್ತಾರೆ.

### ಕೋಥಿ ಸಂಸ್ಕೃತಿ

ದಕ್ಷಿಣ ಏಷ್ಯಾದಲ್ಲಿ 'ಕೋಥಿ' ಎಂಬ ಪದವನ್ನು ಬೇರೆ ಬೇರೆ ರೀತಿಯ ಭಿನ್ನತೆಯೊಂದಿಗೆ ಉಪಯೋಗಿಸಲಾಗುತ್ತದೆ. ಕೋಥಿ ಎಂಬುದು ಇಂಗ್ಲೀಷು ಮಾತನಾಡದ ಹೆಣ್ಣುತನವನ್ನು ಹೊಂದಿರುವ ಸಲಿಂಗಕಾಮಿಗಳು ಗುರುತಿಸಿಕೊಳ್ಳುವ ರೀತಿಯಾಗಿದ್ದು, ಇದು ಗೇ/ಬೈಸೆಕ್ಸುಯಲ್ ಅಂದರೆ ಸಲಿಂಗ/ದ್ವಿಲಿಂಗ ಕಾಮಿ ಎಂದು ಗುರಿತಿಸಿಕೊಳ್ಳುವುದಿಲ್ಲ. ಹೆಚ್ಚಾಗಿ ಆ ರೀತಿ ಗುರುತಿಸಿಕೊಳ್ಳುವವರ ಇಂಗ್ಲೀಷು ಮಾತನಾಡುವವರಾಗಿರುತ್ತಾರೆ. ಕೋಥಿಗಳು ಹೆಚ್ಚಾಗಿ ಆಂಗ್ಲ ಭಾಷೆ ಬಾರದ, ಕೆಳ ಮಧ್ಯಮ ವರ್ಗಕ್ಕೆ ಸೇರಿದ, ತಮ್ಮ ಸ್ಥಾನ ಮಾನಕ್ಕೆ ಭಾಷೆ, ಶಿಕ್ಷಣ, ಆರ್ಥಿಕ, ಸಾಮಾಜಿಕ ಸ್ಥಾನಮಾನ ಹಾಗು ಅವರ ಲೈಂಗಿಕತೆಯೇ ಕಾರಣವೆಂದು (ಸಂಪನ್ಮೂಲಗಳು/ಮಾಹಿತಿ ಉದ್ಯೋಗದ ಕೊರತೆಯಿಂದ) ಗುರುತಿಸಿಕೊಳ್ಳುತ್ತಾರೆ. ಕೋಥಿ ಎಂಬುದನ್ನು ಗಂಡಸರೊಡನೆ ಲೈಂಗಿಕ ಕ್ರಿಯೆಯಲ್ಲಿ ಹೆಣ್ಣಿನ ಪಾತ್ರವನ್ನು ವಹಿಸುವ ಸಲಿಂಗ ಗಂಡಸರೆಂದು ಕರೆಯಬಹುದು.ಕೋಥಿ ಸಂಸ್ಕೃತಿಯ ರಚನೆಯು ಲೈಂಗಿಕ/ ಲಿಂಗ ಅಸ್ಮಿತೆಗಷ್ಟೆ ಸೀಮಿತವಾಗದೆ, ದಕ್ಷಿಣ ಏಷ್ಯಾಗೆ ವಿಶೇಷವಾದ ಸಾಮಾಜಿಕ-ಸಾಂಸ್ಕೃತಿಕ ಅಸ್ಮಿತೆಗೂ ಸಂಬಂಧಪಟ್ಟಿದೆ.

ಸಮಾಜದ, ಕುಟುಂಬದ ಒತ್ತಡಕ್ಕೆ ಮಣಿದು ಹಲವಾರು ಕೋಥಿಗಳು ಮದುವೆಯಾಗಿ, ಮಕ್ಕಳನ್ನು ಮಾಡಿಕೊಂಡರು. ಮದುವೆಯ ಹೊರಗೆ ಬೇರೆ ಗಂಡಸರೊಡನೆ ಸಂಬಂಧವನ್ನು ಗುಪ್ತವಾಗಿ, ನಾಚಿಕೆಯಿಂದ ಇಟ್ಟುಕೊಂಡಿರುತ್ತಾರೆ. ಬೇರೆ ಕೋಥಿಗಳು ಹಲವಾರು ಸಂಕೀರ್ಣ ಕಾರಣಗಳಾದ ಆರ್ಥಿಕ ಕೊರತೆ, ಕುಟುಂಬದ ನಿರಾಕರಣೆಯಿಂದಾಗಿ ಲೈಂಗಿಕ ಕಾರ್ಮಿಕರಾಗುತ್ತಾರೆ. ಅದಲ್ಲದೆ ಕೆಲಸದ ಸ್ಥಳದಲ್ಲಿ ಲೈಂಗಿಕ ಕಿರುಕುಳಕ್ಕೆ ಒಳಗಾಗುವ ಕಾರಣದಿಂದ ಅವರು ಕೆಲಸ ಮಾಡಲು ಅಸಾಧ್ಯವಾಗುತ್ತದೆ.

ಜೆಂಡರ್‌ಗೆ ಸಂಬಂಧಿಸಿದಂತೆ ಕೋಥಿಗಳು ಹಿಜ್ರಾಗಳ ಹಾಗೆ ಹೆಣ್ಣಾಗಿ ತಮ್ಮನ್ನು ತಾವೇ ಗುರುತಿಸಿಕೊಳ್ಳುತ್ತಾರೆ. ಜನನಾಂಗವನ್ನು ತೆಗೆದ ನಂತರ ಹಿಜ್ರಾಗಳು ಒಂದು ರೀತಿಯ ಜೆಂಡರ್‌ಗ ಕೋಥಿಗಳು ಎರಡು ರೀತಿಯ ಜೆಂಡರ್‌ಗಳಲ್ಲೂ ಗುರುತಿಸಿಕೊಳ್ಳುತ್ತಾರೆ. ಗಂಡನಾಗಿ ಗಂಡಸುತನವನ್ನು ಮದುವೆಯ ಸಂಬಂಧದಲ್ಲಿ ತೋರಿಸಿದರೆ ಸಲಿಂಗ ಸಂಬಂಧದಲ್ಲಿ ಹೆಣ್ಣಾಗಿ ಗುರುತಿಸಿಕೊಳ್ಳುತ್ತಾರೆ. ಸಂದರ್ಭಕ್ಕನುಗುಣವಾಗಿ ವರ್ತಿಸುವುದರಿಂದಾಗಿ ಕೋಥಿ ಅಸ್ಮಿತೆಗೆ ಸಾಂಧರ್ಭಿಕವಾದ ಸ್ಥಾನವಿದೆ. ಈ ಸ್ಥಾನವನ್ನು ವಿವಿಧ ಸಂದರ್ಭಗಳಲ್ಲಿ ವಿವಿಧ ಉದ್ದೇಶಕ್ಕನುಗುಣವಾಗಿ ಹೆಣ್ಣಿಗ ಸಲಿಂಗಕಾಮಿ, ಹೆಣ್ಣಿನಂತೆ ಅಲಂಕರಿಸಿಕೊಂಡವರು, ಕೋಥಿಗಳು. ಕ್ಯಾಸ್ಟ್ರೇಷನ್ ಆಗದ ಹಿಜ್ರಾಗಳು ಬಳಸಿಕೊಳ್ಳುತ್ತಾರೆ. (ಜನನಾಂಗವನ್ನು ತೆಗೆಸಿಕೊಳ್ಳಲು ಕಾಯುತ್ತಿದದವರಿಗೆ 'ಆಕ್ವ' ಎಂದರೆ ತೆಗೆಸಿಕೊಳ್ಳಲು ಇಚ್ಛಿಸದವರಿಗೆ 'ಜನ್ನಿ ಜನಾನಿ' ಎಂದು ಕರೆಯಲಾಗುತ್ತದೆ. ಹೆಣ್ಣುತನವನ್ನು ಕೋಥಿಗಳು ಅಲಂಕಾರ, ಹೆಣ್ಣಿನ ರೀತಿಯ ಉಡುಗೆ ತೊಡುಗೆ, ಅಡುಗೆ, ನೃತ್ಯದ ರೂಪದಲ್ಲಿ ತೋರಿಸುತ್ತಾರೆ. ಲೈಂಗಿಕ ಆರೋಗ್ಯದ ದೃಷ್ಟಿಯಲ್ಲಿ ಕೋಥಿಗಳ ಲೈಂಗಿಕ ಕ್ರಿಯೆಯಲ್ಲಿ ಮತ್ತೊಂದು ಗಂಡಿನ ಜೊತೆ ಹೆಣ್ಣಾಗಿ ಪಾತ್ರವಹಿಸಲು, 'ಪಂಥಿ'ಗಳ ಇವರ ಮೇಲೆ ಸಂಭೋಗ ಮಾಡದಂತೆ ಇಚ್ಛಿಸುತ್ತಾರೆ. ಹೀಗಾಗಿ 'ಡಬ್ಬಲ್/ಡೆಕ್ಕರ್/ದೊ ಪರಾತಗಳಂತಹ ಪದಗಳು ಹುಟ್ಟಿಕೊಂಡಿವೆ. ಇವು ಲೈಂಗಿಕ ಕ್ರಿಯೆಯಲ್ಲಿ ಯಾರು ಗಂಡು-ಹೆಣ್ಣಿನ ಪಾತ್ರವಹಿಸುತ್ತಾರೆಂದು ವಿವರಿಸಲು ಉಪಯೋಗಿಸಲಾಗುತ್ತದೆ. ಕೋಥಿಗಳಿಗೆ ಹೆಣ್ಣಾಗಿ ಗುರುತಿಸಿಕೊಳ್ಳುವುದೇ ಪ್ರಮುಖವಾದುದಾಗಿದೆ.

ಕೋಥಿಗಳು ಹಾಗು ಹಿಜ್ರಾಗಳ ನಡುವೆ ಒಂದು ರೀತಿಯ ರೂಪಾತ್ಮಕ ಸಂಬಂಧ ನಿರ್ಮಾಣವಾಗಿದೆ. ಕಾರಣ ಕೋಥಿಗಳಿಗೆ ನಗರ, ಟೌನುಗಳಲ್ಲಿ ಯಾವುದೇ ಆಧಾರ ನೀಡುವಂತಹ ಸಮುದಾಯ ಅಥವ ಇನ್ನಿತರ ರಚನೆಗಳಿಲ್ಲ. ಹೀಗಾಗಿ ಕೋಥಿಗಳು ಹಿಜ್ರಾ ಉಪಸಂಸ್ಕೃತಿಗಳ ಮೇಲೆ ಬೆಂಬಲ, ಧೈರ್ಯಕ್ಕಾಗಿ ಅವಲಂಬಿತರು. ಹೀಗಾಗಿ ಪರ್ಯಾಯ ಲೈಂಗಿಕತೆಯುಳ್ಳ ಹಿಜ್ರಾ ಹಾಗು ಇಂಗ್ಲೀಷ್ ಮಾತನಾಡದ ಸಮುದಾಯಗಳ ಭಾಷೆ, ಪ್ರತೀಕಗಳು ಅವರ ಪುರಾಣ ಕಥೆಗಳು ಸದಾ ಅದಲು ಬದಲಾಗಿರುತ್ತವೆ.

ಹಲವಾರು ಕಾರಣಗಳಿಂದ ಭಾರತೀಯ ಸಂಸ್ಕೃತಿಯಲ್ಲಿ ಕೋಥಿಗಳು ಕೆಳದರ್ಜೆಯಲ್ಲೇ ಉಳಿಯಬೇಕಾಗಿದೆ. ಕೋಥಿಗಳ ಸಾಮಾಜಿಕ ಲೈಂಗಿಕ ಸಂಪರ್ಕಜಾಲ ಸಡಿಲವಾದುದು. ಇದು ಕೆಲವು ನಿರ್ದಿಷ್ಟ ವಾತಾವರಣಗಳಲ್ಲಿವೆ. ತಮ್ಮಂತಹದೆ ಆಸೆ, ವರ್ತನೆ, ಲೈಂಗಿಕತೆಯ ಗುಣಗಳನ್ನು ಹೊಂದಿರುವವರನ್ನು ಬಯಸಿ ಬರುತ್ತಾರೆ. ಭಾರತದ ಸಮಾಜದಲ್ಲಿ ನಿಜವಾದ 'ಗಂಡಿನ'ಹಾಗೆ ಇರದೆ, ಹೆಣ್ಣಾಗಿ ಆಡುವ ಇವರನ್ನು ಪರಿವಾರದಲ್ಲಿ 'ಗಂಡಸಲ್ಲ'ದ ಕಾರಣಕ್ಕೆ ತಿರಸ್ಕಾರದಿಂದ ನೋಡಲಾಗುತ್ತದೆ. ಅವರನ್ನು ಅಣಕ, ತಮಾಷೆ, ನಿರಾಕರಣೆಗೆ ಯೋಗ್ಯರೆಂಬಂತೆ

ನೋಡಲಾಗುತ್ತದೆ. ಆದರೆ ಪಂಥಿ (ಕೋಥಿ, ಹಿಜ್ರಾಗಳಿಗೆ ಗಂಡು ಜೊತೆಗಾರ) ನಿಜವಾದ ಗಂಡಸು ಅವನಿಗೆ ತಿರಸ್ಕಾರದ ಭಯವಿಲ್ಲ.

ಕೋಥಿಗಳನ್ನು 'ಗಾಂಡು', 'ಕೋಜಾ', 'ಒಂಬದು', 'ಗುಡ್', 'ಕಟ್ಟವಂಡಿ' ಎಂದೆಲ್ಲಾ ಕೀಳಾಗಿ ಕರೆಯಲಾಗುತ್ತದೆ. ಹೀಗಾಗಿ ಅವರ ಸ್ವಾಭಿಮಾನ, ಆತ್ಮಗೌರವಕ್ಕೆ ಸದಾಪೆಟ್ಟು ಬೀಳುತ್ತ, ಯಾವುದಾದರೂ ಒಂದು ಹಂತದಲ್ಲಿ ಅವರು ಆತ್ಮಹತ್ಯೆಗೆ ಪ್ರಯತ್ನಿಸುತ್ತಾರೆ. ಇದಲ್ಲದೆ ಕೆಲಸದ ಸ್ಥಳ, ಶಾಲೆ, ಕಾಲೇಜುಗಳಲ್ಲಿ ಅವರನ್ನು ಕಿರುಕುಳಕ್ಕೆ ಒಪಡಿಸುವುದರಿಂದ ಅವರಲ್ಲಿ ಹೆಚ್ಚು ಶಾಲೆ-ಕಾಲೇಜು ಕಂಡವರಿಲ್ಲ. ಇವರ ಎಸ್.ಟಿ.ಐ/ಹೆಚ್.ಐ.ವಿ. ಸೊಂಕನ್ನು ಪಡೆಯುವ ಸಾಧ್ಯತೆ ಹೆಚ್ಚು. ಹಾಗು ಮದುವೆಯಾಗಿದ್ದರೆ ಹೆಂಡತಿಗೆ ವಿವಿಧ ಸಂಗಾತಿಗಳಿದ್ದರೆ ಅವರಿಗೆಲ್ಲಾ ಸೊಂಕು ತಲುಪಿಸುವ ಸಾಧ್ಯತೆ ಹೆಚ್ಚು. ಈ ಸೊಂಕುಗಳ ತಪಾಸಣೆ, ನಿವಾರಣೆಗೆ ಇರುವ ವ್ಯವಸ್ಥೆಗಳನ್ನು ತಲುಪಲು ಇವರಿಗೆ ಇಂದಿಗೂ ಸಾಧ್ಯವಾಗುತ್ತಿಲ್ಲ.

ಕೋಥಿ ಸಮುದಾಯವನ್ನು ರೋಗಗ್ರಸ್ತರೆಂದು ಸಾಮಾನ್ಯಿಕರಿಸಿ ನೋಡುವುದು ಸರಿಯಲ್ಲ. ಹಲವಾರು ಕೋಥಿಗಳು ಗಟ್ಟಿಗರಾಗಿದ್ದು, ಅವರ ಲಿಂಗ ಅನಿರ್ಧಿಷ್ಟತೆಯನ್ನು ಪರಲಿಂಗೀಯ ರಚನೆಗಳನ್ನು ಪ್ರಶ್ನಿಸುವ ವಿಧಾನವಾಗಿ ನೋಡುತ್ತಾರೆ. ಕೋಥಿಗಳು, ಪೋಲೀಸರ ಕಿರುಕುಳ ಮತ್ತು ಹಿಂಸೆಯ ವಿರುದ್ಧ ಪರಿಣಾಮಕಾರಿಯಾಗಿ ಪ್ರತಿಭಟನೆಗಳನ್ನು ಸಂಘಟಿಸಿದ್ದರ ವಿವರಗಳನ್ನು ಈ ವರದಿಯ ಮುಂದಿನ ಭಾಗಗಳಲ್ಲಿ ನೋಡಬಹುದು.

## *2.3 ಕಡೆಗಣಿಸಲ್ಪಟ್ಟ ಹಿಜ್ರಾ ಹಾಗೂ ಕೋಥಿ ಸಮುದಾಯ : ವರ್ಗ, ಜೆಂಡರ್ ಹಾಗೂ ಲೈಂಗಿಕತೆಯ ಮುಖಾಮುಖಿ*

ಸಮಾಜ ಈಗಾಗಲೇ ವರ್ಗ, ಜಾತಿ, ಧರ್ಮ, ಭಾಷೆ, ಶಿಕ್ಷಣದ ಹೆಸರಲ್ಲಿ ಶ್ರೇಣೀಕರಣಗೊಂಡಿದೆ. ಇವೆಲ್ಲದರೊಡನೆ ಲೈಂಗಿಕತೆ ಮೆಳೈಸಿ ಇನ್ನೂ ಆಳವಾದ, ವಿಭಿನ್ನ ರೀತಿಯ ಶೋಷಣೆಯನ್ನು ಆಳವಾದ, ವಿಭಿನ್ನ ರೀತಿಯ ಶೋಷಣೆಯನ್ನು ಸೃಷ್ಟಿಸುತ್ತದೆ. ಒಂದು ಸಮಾಜದಲ್ಲಿ ಹಿಜ್ರಾಗಳಿಗೆ ಒಂದು ರೀತಿಯ ಒಪ್ಪಿಗೆ ಇದ್ದರೂ, ಪ್ರಸ್ತುತವಾಗಿ ಕೋಥಿ ಹಾಗು ಹಿಜ್ರಾಗಳ ವರ್ಗದ ಕಾರಣದಿಂದ ಶಿಕ್ಷಣ, ಉದ್ಯೋಗದಿಂದ ವಂಚಿತರಾಗಿದ್ದಾರೆ. ದಿನನಿತ್ಯ ಅವರುಅನುಭವಿಸುವ ಹಿಂಸೆ, ಅದರಲ್ಲೂ ಲೈಂಗಿಕ ಕಾರ್ಮಿಕರಾಗಿ ದುಡಿಯುವ ಅವರ ಸ್ಥಿತಿಗತಿಗಳಿಗೂ ಅವರು ಕೆಳವರ್ಗಕ್ಕೆ ಸೇರಿರುವುದಕ್ಕೆ ಸಂಬಂಧವಿದೆ.

ಬೆಂಗಳೂರಿನಲ್ಲಿ ನಾವು ಕೋಥಿ ಹಾಗು ಹಿಜ್ರಾಗಳೊಡನೆ ನಡೆಸಿದ ಚರ್ಚೆಯಿಂದ ಅವರು ವಿವಿಧ ಕಾರಣಗಳಿಗೋಸ್ಕರ ಲೈಂಗಿಕ ಕಾರ್ಮಿಕರಾಗಿ ಕೆಲಸ ಮಾಡಲು ಸ್ವಇಚ್ಛೆ ಯಿಂದ ಹೋಗುತ್ತಾರೆ. ಒಂದು ತಮ್ಮ ಸಂಸಾರಕ್ಕೆ ಅವರು ಹೊಂದಿರುವ ಜವಾಬ್ದಾರಿಯನ್ನು ನೆರವೇರಿಸಲು ಇದನ್ನು ಆರಿಸಿಕೊಳ್ಳುತ್ತಾರೆ. ಹಿಜ್ರಾ ಆಗಿ ತಾನು ತನ್ನನ್ನೇ ಒಪ್ಪಿಕೊಂಡು, ಹಿಜ್ರಾ ಸಮುದಾಯಗಳೊಗೆ ಸಿಗುವ ಒಂದು ರೀತಿಯ ಸ್ವಾತಂತ್ರ್ಯ ಇನ್ನೊಂದು ಕಾರಣ ಹೀಗಾಗಿ ಹಿಜ್ರಾಗಳು ಲೈಂಗಿಕ ಕೆಲಸವನ್ನು ದಿಟ್ಟತನದಿಂದ ಎತ್ತಿಹಿಡಿದು, ಅದು ಒಂದು ರೀತಿಯ ಕೆಲಸವೆಂದು ವಾದಿಸುತ್ತಾರೆ.

ಹಿಜ್ರಾ ಸಮುದಾಯದ ಆಯ್ಕೆಗಳಿಗೆ ನಿರ್ದಿಷ್ಟ ವರ್ಗ ಹಾಗು ಲೈಂಗಿಕತೆಯ ಮಿತಿಗಳಿವೆ. ಯಾವುದೇ ಹಿಜ್ರಾ ದೊಡ್ಡ ಕಂಪನಿಯ ಮಾಲೀಕನಾಗುವ, ಸರ್ಕಾರಿ ನೌಕರಿ ಮಾಡುವ, ಲಾಯರ್, ಡಾಕ್ಟರ್ ಆಗಲು ಸಾಧ್ಯವಾಗುವುದಿಲ್ಲ. ದಕ್ಷಿಣ ಭಾರತದಲ್ಲಿ ಹಿಜ್ರಾಗಳು ತೀರಾ ಬೆರಳೆಣಿಕೆಯ

ಜಾಗಗಳಲ್ಲಿ ಉದ್ಯೋಗ ಮಾಡುತ್ತಿದ್ದು, ಅವರನ್ನು ಗೌರವದಿಂದ ನಡೆಸಿಕೊಳ್ಳಲಾಗುತದೆ. ಬಿಕ್ಷೆ ಬೇಡುವುದು, ಲೈಂಗಿಕ ಕಾರ್ಮಿಕರಾಗುವುದು ಮಾತ್ರ ಅವರಿಗೆ ಇರುವ ಆಯ್ಕೆಗಳು. ಹೀಗೆ ಜೆಂಡರ್ ಪಾತ್ರ ನಿರಾಕರಣೆ ಹಾಗು ಸಮಾಜದ ದೃಷ್ಟಿಕೋನ ಹಿಜ್ರಾಗಳ ಬದುಕಿನ ಆಯ್ಕೆಗಳನ್ನು ಮೊಟಕು ಮಾಡುತ್ತದೆ.

ವರ್ಗ, ಜೆಂಡರ್ ಹಾಗು ಲೈಂಗಿಕ ತಾರತಮ್ಯದಿಂದ ಆಧಾರವಾಗುವುದಲ್ಲದೆ ಅವರ ಆರ್ಥಿಕ ಉನ್ನತಿ, ಶೈಕ್ಷಣಿಕ-ಔದ್ಯೋಗಿಕ ಉನ್ನತಿಯನ್ನು ಸಾಧ್ಯವಾಗಿಸದೆ ಹೋಗುತ್ತದೆ. ಇದಕ್ಕಾಗಿಯೇ ಲೈಂಗಿಕತೆ, ಲೈಂಗಿಕ ಅಲ್ಪಸಂಖ್ಯಾತರ ಜೀವನ ಶೈಲಿಗಳ ಬಗ್ಗೆ ಮಾಹಿತಿ ಅವರಿಗೆ ಸಿಗುವುದೇ ಇಲ್ಲ. ಹಕ್ಕುಗಳನ್ನು ಕುರಿತಾದ ಮಾಹಿತಿ, ಲೈಂಗಿಕ ಅಲ್ಪಸಂಖ್ಯಾತರ ಬದುಕಿನ ಬಗೆಗಿರುವ ಲೇಖನಗಳೆಲ್ಲಾ ಇಂಗ್ಲೀಷ್‌ನಲ್ಲೇ ಇರುವ ಕಾರಣ ಓದಲು, ಬರೆಯಲು ಬಾರದ ಹಿಜ್ರಾ, ಕೋಥಿಗಳಿಗೆ ಅದು ಎಟುಕದೆ ಹೋಗುತ್ತದೆ.

## ಸ್ವಂತ ಹೇಳಿಕೆಗಳು :

**ಲೀಲಾ** ಕಟ್ಟಡ ನಿರ್ಮಾಣದಲ್ಲಿ (ಬಾರ್ ಬೆಂಡರ್ ಆಗಿ) ದುಡಿಯುತ್ತಿದ್ದಳು. ಸಿಗುತ್ತಿದ್ದ ದಿನಗೂಲಿ 70/- ರಿಂದ 75/- ರೂ. ನಲ್ಲಿ ಅವಳ, ಅವಳ ತಂದೆಯ ಬದುಕು ಸಾಗುತ್ತಿರಲಿಲ್ಲ. ಯಾವುದೇ ಗಂಡು ಅಥವಾ ಹಿಜ್ರಾ ಲೈಂಗಿಕ ಕಾರ್ಮಿಕರಂತೆ ಅವಳು ಈಗ ಲೈಂಗಿಕ ಕೆಲಸದಿಂದ ದಿನಕ್ಕೆ 100 ರಿಂದ 150 ರೂ. ವರೆಗೂ ದುಡಿಯುತ್ತಾಳೆ.



**ಲತಾ (20-21 ವರ್ಷ, ಕೋಥಿ ಎಂದು ಗುರುತಿಸಿಕೊಳ್ಳುತ್ತಾಳೆ)** ಖಾಸಗಿ ಕಂಪನಿಯಲ್ಲಿ 3 ವರ್ಷ ಕೆಲಸ ಮಾಡಿದಳು. ಹಿಜ್ರಾ ಒಬ್ಬಳ ಸಂಪರ್ಕದಿಂದ ಹಮಾಮ್‌ಗೆ ಹೋಗಿ ಅಲ್ಲಿಂದ ಲೈಂಗಿಕ ಕೆಲಸ ಪ್ರಾರಂಭಿಸಿದಳು. ಅವಳಿಗೆ ಹಳೆಯ ಕೆಲಸಕ್ಕೆ ಹೋಗಲು ಸಾಧ್ಯವಿಲ್ಲ. ಕಾರಣ ಅವಳಿಗೆ ಹಿಜ್ರಾ ಆಗುವ ಆಸೆ (ಒಂದು ಗಂಡು ಹೆಣ್ಣಿನಂತೆ ಸೀರೆ ಉಡುವುದು). ಒಮ್ಮೆ ಲೈಂಗಿಕ ಕೆಲಸ ಮಾಡಿದ ಮೇಲೆ ಕಡಿಮೆ ದುಡ್ಡು ಸಿಗುವ ಯಾವುದೇ ಕೆಲಸಕ್ಕೆ ಹೋಗುವುದು ಕಷ್ಟ.



ಹೆಣ್ಣೆಂದು ಗುರುತಿಸಿಕೊಳ್ಳುವ 28 ವರ್ಷ ವಯಸ್ಸಿನ ದೇವಿಗೆ ತಾನು ಮಾಡುತ್ತಿದ್ದ ಉದ್ಯೋಗದಿಂದ ಅವಳ ಹಾಗು ಅವಳ ತಾಯಿ-ತಂದೆಯರ ಬದುಕನ್ನು ತೂಗಿಸುವುದು ಸಾಧ್ಯವಾಗುತ್ತಿರಲಿಲ್ಲ. ಅವಳ ವಯಸ್ಸಾದ ತಾಯಿ-ತಂದೆಯರು ತಮಿಳುನಾಡಿನ ಹಳ್ಳಿಯೊಂದರಲ್ಲಿದ್ದಾರೆ. ಅವರಿಗೆ, ದೇವಿ ಸೆಕ್ಸ್ ವರ್ಕ್ ಮಾಡುತ್ತಿರುವುದು ಗೊತ್ತಿದೆ. ಆ ಕೆಲಸದಿಂದ ಅವಳ ಹಾಗು ಅವರ ಬದುಕು ನಡೆಯುತ್ತದೆ ಎಂಬ ಭರವಸೆ ಅವರಿಗಿದೆ.

ಲಿಂಗ ಬದಲಾಯಿಸಿಕೊಳ್ಳುವ ಆಪರೇಷನ್ ಮಾಡಿಸಿಕೊಂಡ ಮೇಲೆ ಕಲ್ಯಾಣಿಗೆ ತನ್ನ ಇಂಜಿನಿಯರಿಂಗ್ ಓದು ಮುಂದುವರೆಸಲು ಸಾಧ್ಯವಾಗಲಿಲ್ಲ. ಇಂದು ಕಲ್ಯಾಣಿ ಲೈಂಗಿಕ ಕೆಲಸ ಮಾಡುತ್ತಾಳೆ.



ರಾಣಿ ಕಿರಾಣಿ ಅಂಗಡಿಯಲ್ಲಿ ಕೆಲಸ ಮಾಡುತ್ತಿದ್ದಳು. ಲಿಂಗ ಬದಲಾಯಿಸಿಕೊಳ್ಳುವ ಆಪರೇಷನ್ ಆದ ನಂತರ ಆ ಕೆಲಸವನ್ನು ಮುಂದುವರೆಸಲು ಆಗಲಿಲ್ಲ. ನಂತರ ಹಮಾಮ್‌ನಲ್ಲಿ ಇರಲು ಪ್ರಾರಂಭಿಸಿ ಅವಳು ಲೈಂಗಿಕ ಕೆಲಸ ಮಾಡಲು ಪ್ರಾರಂಭಿಸಿದಳು. ಪಿ.ಯೂ.ಸಿ.ವರೆಗೂ ಓದಿದ್ದಾಳೆ. ಸಂಸ್ಥೆಯೊಂದರಲ್ಲಿ ಕೆಲಸ ಮಾಡುತ್ತಿರುವ ಅವಳು ಕೆಲಸದ ಅವಧಿಯ ನಂತರ ಲೈಂಗಿಕ ಕಾರ್ಮಿಕಳಾಗಿ ದುಡಿಯುತ್ತಾಳೆ. ಆ ಬಗ್ಗೆ ಅವಳಿಗೆ ಬೇಸರವಿಲ್ಲ. ಆಕೆಗೆ, ಲೈಂಗಿಕ ಕಾರ್ಮಿಕಳಾಗಿರುವುದರ ಜೊತೆಗೆ ಸಾಮಾಜಿಕ ಕಾರ್ಯಕರ್ತೆಯಾಗಿಯೂ ಕೆಲಸ ಮಾಡುತ್ತಿರುವುದು ಹೆಮ್ಮೆ ಎನಿಸುತ್ತದೆ. ಲೈಂಗಿಕ ದುಡಿಮೆಯಲ್ಲಿ ಕಷ್ಟಗಳಿದ್ದರೂ ಸಹ ಈ ದುಡಿಮೆಯ ಮೇಲೆ ಬೇರೆ ದುಡಿಮೆಗೆ ಹೋಲಿಸಿದರೆ ನನಗೆ ಹೆಚ್ಚಿನ ನಿಯಂತ್ರಣವಿದೆ ಎಂದು ಹೇಳುತ್ತಾಳೆ.



ರೂಮಾ(25) ಕೋಥಿಗಳಿಗೆ ತಮ್ಮ ಸಮುದಾಯದ ಹೊರಗಿನ ಸಮಾಜದಲ್ಲಿ ಕೆಲಸ ಮಾಡುವಾಗ ಕಿರುಕುಳ ಹೆಚ್ಚೆಂದು ಹೇಳುತ್ತಾಳೆ. ಲೈಂಗಿಕ ಕೆಲಸದಲ್ಲಿ ಸ್ವಾತಂತ್ರ್ಯವಿದೆ ಹಾಗು ಕಡಿಮೆ ಅಡೆತಡೆಗಳಿವೆ ಎನ್ನುತ್ತಾಳೆ.

ರೂಮಾ ವಿಚಾರಗಳನ್ನು ಸಮರ್ಥಿಸುವ ರೂಪ ಸೀರೆ ಉಟ್ಟು ಬಾಳುತ್ತೇನೆ. ಪ್ಯಾಂಟು-ಅಂಗಿ ಬೇಡವೆನ್ನುತ್ತಾಳೆ. ಲೈಂಗಿಕ ಕೆಲಸ ಪ್ರಾರಂಭಿಸಿದ ಅವಳಿಗೆ ಬೇರೆಡೆ ಕೆಲಸ ಮಾಡಲು ಮನಸ್ಸಾಗುತ್ತಿಲ್ಲ.

# ಕೋಥಿ ಮತ್ತು ಹಿಜ್ರಾ ಲೈಂಗಿಕ ಕಾರ್ಮಿಕರ ಹಿಂಸೆ ಮತ್ತು ದೌರ್ಜನ್ಯದ ವೃತ್ತಾಂತಗಳು



*3.1 ಎರಡು ಸತ್ಯಕಥೆಗಳು*

ಮಾನವ ಹಕ್ಕುಗಳ ದೃಷ್ಟಿಕೋನದಲ್ಲಿ ಹಿಜ್ರಾ ಹಾಗೂ ಕೋಥಿಗಳ ಸಂದರ್ಭವನ್ನು ನೋಡಿದಾಗ ಬಹುಮುಖ್ಯವಾಗುವ ಕಾಳಜಿ ಏನೆಂದರೆ – ಪ್ರಭುತ್ವ ಮತ್ತು ಸಮಾಜದಿಂದ ಅವರ ಮೇಲಾಗುವ ಹಿಂಸೆ. ಹಿಜ್ರಾ ಹಾಗೂ ಕೋಥಿಗಳ ಜೀವನದಲ್ಲಿ ಪ್ರತಿದಿನದ ವಾಸ್ತವವಾಗಿರುವ ದೌರ್ಜನ್ಯದ ಚಿತ್ರಣ ನೀಡಲು ಹಾಗೂ ವಿವಿಧ ರೀತಿಯಲ್ಲಿ ಆಗುವ ಹಿಂಸೆ ಹಾಗೂ ಕಿರುಕುಳವನ್ನು ತಾತ್ವಿಕರಿಸಲು ಇಲ್ಲಿ ನಾವು ಎರಡು ಕಥನಗಳನ್ನು ಕೊಟ್ಟಿದ್ದೇವೆ.

ಲೈಂಗಿಕ ಕಿರುಕುಳ ಮತ್ತು ಅವಮಾನವನ್ನು ವಿವರಿಸಲು ಈ ಕಥಾನಕಗಳಲ್ಲಿ ಬಳಸಿರುವ ಭಾಷೆಯು ಒರಟಾಗಿ ಆಘಾತಕಾರಿಯಾಗಿರುವುದರ ಬಗ್ಗೆ ಓದುಗರಿಗೆ ಎಚ್ಚರಿಕೆ ನೀಡಬಯಸುತ್ತೇವೆ. ನಮ್ಮ ಉದ್ದೇಶ ಅಸಹ್ಯ ಹುಟ್ಟಿಸುವುದೊ ಅಥವಾ ಗಾಬರಿ ಹುಟ್ಟಿಸುವುದೊ ಅಲ್ಲ, ಬೀದಿಗಳಲ್ಲಿ ಹಿಜ್ರಾ ಮತ್ತು ಕೋಥಿಗಳು ಅನುಭವಿಸುವ ಘೋರ ದೈಹಿಕ, ಮಾನಸಿಕ ಹಿಂಸೆಯನ್ನು ಕೊಂಚಮಟ್ಟಿಗೆ ಪರಿಚಯಿಸುವುದಾಗಿದೆ.

ನಮ್ಮಲ್ಲಿ ಕೆಲವರು ಎಂದೂ ಈ ಕಥಾನಕಗಳನ್ನು ಓದಲಿಚ್ಛಿಸದಿರಬಹುದು, ಇಂತಹ ಸಾಮಾಜಿಕ ಹಿಂಸೆಗೆ ಕುರುಡಾಗಿರಲು ಬಯಸಬಹುದು. ಈ ಕಥಾನಕಗಳನ್ನು ಅವಿರುವ ರೀತಿಯಲ್ಲೆ ಉಳಿಸಿಕೊಳ್ಳುವುದರ ಹಿಂದಿರುವ ಉದ್ದೇಶವೇನೆಂದರೆ – ಓದುಗರನ್ನು ಬಡಿದೆಬ್ಬಿಸಿ, 21ನೇ ಶತಮಾನದಲ್ಲೂ ಇಂತಹ ಘೋರ ಹಿಂಸೆ ನಡೆಯುತ್ತಿರುವುದು ಒಪ್ಪತಕ್ಕದ್ದಲ್ಲವೆಂದು ಪ್ರತಿಪಾದಿಸುವಂತೆ ಮಾಡುವುದಾಗಿದೆ.

ಇಂತಹ ಪ್ರಯತ್ನಗಳ ಮೂಲಕ ಪರಲಿಂಗಿಯ ಸಾಮಾಜಿಕ ವ್ಯವಸ್ಥೆಯ ಘೋರ ಬಹಿಷ್ಕಾರವನ್ನು ಪ್ರಶ್ನಿಸುವ ಅಗತ್ಯ ನಮಗಿದೆ. ಪರಲಿಂಗೀಯ ವ್ಯವಸ್ಥೆಯು ನಡೆಸುವ ಹಿಂಸೆಯನ್ನು ಸುಗಮವಾಗಿ ನಡೆಯುವ ಸಾಮಾಜಿಕ ಸಂಸ್ಥೆಯು ಸಾಮಾನ್ಯ ಮನುಷ್ಯನಿಂದ ಮರೆಮಾಚಿಸಿದೆ. ಮರೆಮಾಚಲಾಗಿರುವ ಪರಲಿಂಗೀಯ ವ್ಯವಸ್ಥೆಯ ಹಿಂಸೆಯನ್ನು ಬೆಳಕಿಗೆ ತರುವ ಮೂಲಕ ಪ್ರಶ್ನಿಸುವ ಪ್ರಕ್ರಿಯೆಯನ್ನು ಪ್ರಾರಂಭಿಸಬಹುದೆನ್ನುವ ಭರವಸೆ ನಮಗಿದೆ. ಈ ಪ್ರಕ್ರಿಯೆಯು, ಸಾಂಪ್ರದಾಯಿಕ ಸಮಾಜದ ನಿಯಮಗಳನ್ನು ಒಪ್ಪದಿರುವವರೆಲ್ಲರಿಗೂ ಸುರಕ್ಷಿತ ವಾತಾವರಣ ಕಲ್ಪಿಸುವುದಕ್ಕೆ ಎಡೆಮಾಡಿಕೊಡಬಹುದು.

ಈ ಕಥಾನಕಗಳನ್ನು ಸಂಗ್ರಹಿಸುವಾಗ, ಯಾಕೆ ಕೆಲವು ಜನರು ದಿನನಿತ್ಯ ಇಂತಹ ಹಿಂಸೆಯನ್ನು ಅನುಭವಿಸುತ್ತಾರೆಂಬ ಪ್ರಶ್ನೆ ನಮ್ಮನ್ನು ಕಾಡಿತು. ಊಹಿಸಲೂ ಸಾಧ್ಯವಾಗದ ಹಿಂಸೆ ಜರುಗುವುದು ಮತ್ತದನ್ನು ಬಹುಪಾಲು ಜನ ಒಪ್ಪಿಕೊಳ್ಳುವುದು ಕಾನೂನು, ಕುಟುಂಬ, ವೈದ್ಯಕೀಯ ವ್ಯವಸ್ಥೆ ಹಾಗು ಮಾಧ್ಯಮದ ಸಂಕೀರ್ಣ ರಚನೆಗಳಿಂದಾಗಿ ಎಂಬುದನ್ನು ವರದಿಯ ಮುಂದಿನ ಭಾಗಗಳು ಸಾಬೀತುಪಡಿಸುತ್ತವೆ.

## ಸಚಿನ್ ಕಥೆ

ನನ್ನ ಹೆಸರು ಸಚಿನ್, ವಯಸ್ಸು 23. ನಾಲ್ಕು ಅಕ್ಕಂದಿರು ಇರುವ ಪರಿವಾರದಲ್ಲಿ ನಾನು ಐದನೆಯವನು. ಚಿಕ್ಕಂದಿನಲ್ಲಿ ನನಗೆ ವಿಭೂತಿ ಅಥವಾ ಕುಂಕುಮ ಹಚ್ಚಿಕೊಳ್ಳಲು ಬಹಳ ಇಷ್ಟವಾಗುತ್ತಿತ್ತು ಹಾಗೂ ನನ್ನ ತಂದೆ ತಾಯಿ ನನ್ನನ್ನು ಹೆಣ್ಣು ಮಗಳೆಂದೇ ಭಾವಿಸಿದ್ದರು. ನಾನು ಗಂಡಸು ಆದರೆ ನನ್ನ ಭಾವನೆಗಳು ಹೆಂಗಸಿನದು. ಅಡುಗೆ, ಬಟ್ಟೆ ಒಗೆಯುವುದು, ಮನೆ ಸ್ವಚ್ಛ ಮಾಡುವುದು ಮುಂತಾದ ಮನೆಗೆಲಸಗಳಲ್ಲಿ ನಾನು ಅಮ್ಮನಿಗೆ ಸಹಾಯ ಮಾಡುತ್ತಿದ್ದೆ. ಕಾಲ ಕಳೆದ ಹಾಗೆ ನನ್ನ ಅಕ್ಕಂದಿರಿಗೆ ಮದುವೆಯಾಯಿತು. ನನ್ನ ತಂದೆ ತಾಯಿ ವೃದ್ಧರಾದರು. ಆಗ ನನಗೆ 17 ವರ್ಷ. ಮನೆಗೆಲಸಗಳಲ್ಲಿ ತೊಡಗಿಹೋದೆ. 'ಹೊರಗೆ ಹೋಗಿ ಗಂಡಸಿನಂತೆ ಏಕೆ ಕೆಲಸ ಮಾಡುವುದಿಲ್ಲ?' ಅಥವಾ 'ಹುಡುಗಿಯರಂತೆ ಮನೆಯಲ್ಲಿ ಏಕೆ ಇರುತ್ತೀಯಾ?', ಎಂದು ಅಕ್ಕಪಕ್ಕದವರು ಹೀಯಾಳಿಸತೊಡಗಿದರು. ಆದರೆ ನನಗೆ ಹುಡುಗಿಯಾಗಿರುವುದು ಇಷ್ಟವಾಗುತ್ತಿತ್ತು. ಹೊರಗೆ ಹೋಗಿ ಕೆಲಸ ಮಾಡಲು ನಾಚಿಕೆಯಾಗುತ್ತಿತ್ತು. ಇದರ ಬಗ್ಗೆ ನನ್ನ ಸಂಬಂಧಿಗಳು ನನ್ನನ್ನು ಬಯ್ಯಲಾರಂಭಿಸಿದರು. ನೀರು ತರಲು ಹೊರಗೆ ಹೋಗಿ ಹಿಂದಿರುಗುವಾಗಲೆಲ್ಲ ನನ್ನನ್ನು ರೇಗಿಸುತ್ತಿದ್ದರು. ನನಗೆ ತುಂಬಾ ಅವಮಾನವಾಗುತ್ತಿತ್ತು. ಕೆಲವೊಮ್ಮೆ ಆತ್ಮಹತ್ಯೆ ಮಾಡಿಕೊಳ್ಳೋಣವೆನಿಸುತ್ತಿತ್ತು. ನಾನು ಈ ರೀತಿ ಹೇಗೆ ಬದುಕುವುದು ಎನಿಸುತ್ತಿತ್ತು. ಆದರೆ ನನ್ನ ತಂದೆ ತಾಯಿ ಪ್ರತಿವಾದಿಸುತ್ತಿರಲಿಲ್ಲ. ಅವರಿಗೆ ದಿಕ್ಕು ತೋಚದಂತಾಗಿತ್ತು. ಇದರಿಂದ ತಪ್ಪಿಸಿಕೊಳ್ಳಲು ನನ್ನ ತಂದೆ ತಾಯಿ ಊರನ್ನು ಬಿಟ್ಟು ಹೋಗಲು ಹೇಳಿದರು. ಬೇರೆ ಎಲ್ಲಾದರೂ ಕೆಲಸ ಮಾಡಲು ಹೇಳಿದರು. ನನಗೆ ಓದು ಬರಹ ಬರದು, ನಾನು ಶಾಲೆಗೆ ಹೋಗಿಲ್ಲ. ನನಗೆ ಯಾರು ಕೆಲಸ ಕೊಡುವವರು? ಆ ರಾತ್ರಿ ನಾನು ಬಹಳ ನೊಂದುಕೊಂಡೆ. ನನ್ನ ತಂದೆ, ತಾಯಿಗೆ ತಮ್ಮ ಮಗನಿಗಿಂತಲೂ ಸಮಾಜದ ಗೌರವವೇ ಹೆಚ್ಚು ಎಂದು ಅರಿತೆ. ಸಾಯಲು ಇಲಿ ಔಷಧಿಯನ್ನು ನುಂಗಿದೆ. ಆದರೆ ಸಾಯುವ ಬದಲು ತುಂಬಾ ವಾಂತಿಯಾಯಿತು. ವಾಂತಿ ಮಾಡುವ ಸದ್ದಿಗೆ ಎಚ್ಚರವಾದ ನನ್ನ ತಂದೆ ತಾಯಿಯರು ನನ್ನನ್ನು ಆಸ್ಪತ್ರೆಗೆ ಕರೆದೊಯ್ದರು. ಚೇತರಿಸಿಕೊಂಡ ಮೇಲೆ "ನೀವು ನನ್ನ ಹೋಗಲು ಹೇಳಿದಿರಿ ಆದರೆ ನಾನು ಹೋಗಲು ಯಾವ ಜಾಗವೂ ಇಲ್ಲ, ಓದೂ ಇಲ್ಲ, ಬೇರೆ ಕೆಲಸ ಮಾಡಲು ಬರಲ್ಲ. ಆದ್ದರಿಂದ ಸಾವೇ ಗತಿ ಎಂದಲು ಸಾಯಲು ಹೊರಟೆ" ಎಂದು ನನ್ನ ತಂದೆ ತಾಯಿಗಳಿಗೆ ಹೇಳಿದೆ.

ಈ ಘಟನೆಯ ನಂತರ ಮನೆಬಿಡಲು ನಿರ್ಧರಿಸಿದೆ. ರಾತ್ರಿ ಒಂದು ಗಂಟೆಯಲ್ಲಿ 5

ಪ್ಯಾಂಟ್, 5 ಶರ್ಟು ಹಾಗೂ ಜೇಬಿನಲ್ಲಿ ರೂ.500 ತೆಗೆದುಕೊಂಡು ತಿರುಪತಿಗೆ ಹೊರಟೆ. ದೇವಸ್ಥಾನದ ಹೊರಗೆ ಕುಳಿತು ತುಂಬಾ ಅತ್ತೆ. ಆಗ ಒಬ್ಬ ಅಜ್ಜ ನನ್ನನ್ನು ಏಕೆ ಅಳುತ್ತಿದ್ದೇನೆ ಎಂದು ಕೇಳಿದಾಗ ನನ್ನ ಕಥೆಯನ್ನು ಕೇಳಿದ ಅವನು ಹಿಜ್ರಾಗಳ ಬಗ್ಗೆ ಹೇಳಿದ. ಅವರೊಡನೆ ಸೇರಲು ಹೇಳಿದ. ಅದೇ ಮೊದಲ ಬಾರಿ ನಾನು ಹಿಜ್ರಾಗಳ ಬಗ್ಗೆ ಕೇಳಿದ್ದು. ಸ್ವಲ್ಪ ಸಿಂಗರಿಸಿಕೊಂಡು ಶರ್ಟು ಪ್ಯಾಂಟು ಹಾಕಿ ದೇವಸ್ಥಾನದ ಬಳಿ ಕುಳಿತಾಗ ಒಬ್ಬಾತ ಬಂದು ತನ್ನ ಹೋಟೆಲ್ ರೂಮಿಗೆ ಕರೆದೊಯ್ದ. ಅಲ್ಲಿ ನಾನು ಅವನೊಡನೆ ಸೆಕ್ಸ್ ಮಾಡಿದೆ. ಅವನು ತುಂಬಾ ಒಳ್ಳೆಯವನು. ಆದಿನ ಸಾಯಂಕಾಲ ಅವನು ಹೊರಟು ಹೋಗುತ್ತಿದ್ದರೂ ಬೆಳಗ್ಗೆಯವರೆಗೂ ರೂಮ್ ಬಾಡಿಗೆ ಕಟ್ಟಿ ನನ್ನನ್ನು ಬೆಳಗ್ಗೆಯವರೆಗೂ ಅಲ್ಲಿಯೆ ಇರಲು ಬಿಟ್ಟ. ನನಗೆ 200 ರೂ. ಕೊಟ್ಟ. ರೂಮು ನನ್ನದಾದ್ದರಿಂದ ಆ ರಾತ್ರಿ ಪಾರ್ಕಿಗೆ ಹೋಗಿ ಇನ್ನಿಬ್ಬರನ್ನು ಕರೆತಂದೆ. ಅವರ ಜೊತೆಯೂ ಸೆಕ್ಸ್ ಮಾಡಿದೆ. ಅವರೂ ದುಡ್ಡು ಕೊಟ್ಟರು. ಇದು ನನ್ನ ಜೀವನವನ್ನೇ ಬದಲಾಯಿಸಿಬಿಟ್ಟಿತು. ನಾನು ನಿಷ್ಪ್ರಯೋಜಕನಲ್ಲ ಎಂದು ತಿಳಿಯಿತು. ಈಗ ನಾನು ನನ್ನನ್ನು ನೋಡಿಕೊಳ್ಳ ಬಲ್ಲೆ, ನಾನು ಬದುಕಬಲ್ಲೆ – ಲೈಂಗಿಕ ವೃತ್ತಿಯಿಂದ.

ತಿರುಪತಿಯಿಂದ ಬೆಂಗಳೂರಿಗೆ ಬಂದು ಕೆಲವು ಹಿಜ್ರಾಗಳ ಜೊತೆ ಸ್ನೇಹ ಬೆಳೆಸಿದೆ. ಹೊಸೂರ್ ರೋಡಿನಲ್ಲಿರುವ ಬೆಂಗಳೂರು ಡೈರಿಯಲ್ಲಿ ಕೆಲಸ ಸಿಗಲು ಅವರು ಸಹಾಯ ಮಾಡಿದರು. ಎಂಟು ಗಂಟೆಗಳ ಅವಧಿಯ 3 ಶಿಫ್ಟ್‌ಗಳಿದ್ದವು ಅದರಲ್ಲಿ ನನ್ನದು ರಾತ್ರಿಯ ಶಿಫ್ಟ್. ಗಂಡಸರ ಹಾಗೇ ಕೆಲಸ ಮಾಡಲು, ಓಡಾಡಲು, ಮಾತನಾಡಲು ಎಷ್ಟು ಪ್ರಯತ್ನ ಪಟ್ಟರೂ ಅಲ್ಲಿ ಜನರಿಗೆ ನನ್ನ ಸ್ತ್ರೀ ಸ್ವಭಾವ ಅರಿವಾಗಿ ನಾನು ಹಿಜ್ರಾ ಎಂದು ಗೊತ್ತಾಯಿತು. ನನ್ನ ಜೊತೆ ಕೆಲಸ ಮಾಡುವವನೊಬ್ಬ ಅವನಿಗೆ ಮೌಖಿಕ ಸಂಭೋಗ ಮಾಡಲು ಕೇಳಿದ. ಆದರೆ ನಾನು ಹಿಜ್ರಾ ಅಲ್ಲ ಎಂದು ಹೇಳಿ ನಿರಾಕರಿಸಿದೆ.

ಡೈರಿಯಲ್ಲಿ ನನಗಿದ್ದುದು ಒಬ್ಬನೇ ಗೆಳೆಯ. ಆದರೆ ನಮ್ಮಿಬ್ಬರ ನಡುವೆ ಲೈಂಗಿಕ ಸಂಬಂಧ ಇರಲಿಲ್ಲ. ರಾತ್ರಿಯ ಶಿಫ್ಟ್‌ನವರು ಸಾಮಾನ್ಯವಾಗಿ ಮಾಳಿಗೆ ಮೇಲೆ ಮಲಗುವುದುಂಟು. ಒಂದು ರಾತ್ರಿ ಅವನ ಬಳಿ ಮಲಗಲು ನನ್ನನ್ನು ಕರೆದ. ಮಲಗಲು ಹೋದಾಗ ಯಾರೊ ನನ್ನ ಕೈಯನ್ನು ಬಿಗಿಯಾಗಿ ಹಿಡಿದರು. ಆಗ ನನ್ನ ಜೊತೆ ನಾಲ್ಕು ಜನ ಗುದಸಂಭೋಗ ಮಾಡಿದರು. ನನ್ನ ಸ್ನೇಹಿತ ನನ್ನಿಂದ ದುಡ್ಡು ಮಾಡುತ್ತಿದ್ದನೆಂದು ತಿಳಿಯಿತು. ಮರುದಿನ ಡೈರಿಯ ಇನ್ಸ್‌ಪೆಕ್ಟರ್‌ಗೆ ಮಹಡಿಯಲ್ಲಿ ಆದ್ದದೆಲ್ಲಾ ತಿಳಿದಿತ್ತು. ಆದರೆ ನನಗೆ ಸಹಾಯ ಮಾಡುವ ಬದಲು ನನ್ನನ್ನು ಬೈದು ಕೆಲಸದಿಂದ ತೆಗೆದು ಹಾಕಿದರು.

ನನ್ನ ಹಳ್ಳಿಯ ಹಳೆಯ ಸ್ನೇಹಿತ ನನಗೆ ಆಸರೆ ಕೊಟ್ಟನು. ಕೆಲಸ ಸಿಗುವುದು ಬಹಳ ಕಷ್ಟವಾಯಿತು. ಎಲ್ಲಿಗೆ ಹೋಗಲಿ ಅರ್ಹತೆ ಹಾಗೂ ಚುರುಕುತನವನ್ನೇ ಕೇಳುತ್ತಿದ್ದರು. ನನ್ನಲ್ಲಿ ಎರಡೂ ಇರಲಿಲ್ಲ. ಕೊನೆಗೆ ಒಂದು ಕಛೇರಿಯಲ್ಲಿ ಕೆಲಸ ಸಿಕ್ಕಿತು. ಮಾಲೀಕನಿಗೆ ಅವನೊಂದಿಗೆ ಸೆಕ್ಸ್ ಮಾಡುವಂತಹ ಸಹಾಯಕ ಬೇಕಿದ್ದ. ತಾನು ಸಹಕರಿಸಿದೆ. ಆದರೆ ಕಡಿಮೆ ದುಡ್ಡಿಗೆ ಎರಡೂ ಕೆಲಸ ಮಾಡುವುದು ನನ್ಗೆ ಸಮಾಧಾನವಾಗಿರಲಿಲ್ಲ. ಆದ್ದರಿಂದ

ಕೇವಲ ಲೈಂಗಿಕ ವೃತ್ತಿಯನ್ನೇ ಮಾಡಲು ನಿರ್ಧರಿಸಿದೆ. ಆದರೆ ಈ ವೃತ್ತಿ ಸುಲಭವಲ್ಲ. ನನ್ನನ್ನು ಸಾಟ್ಲಾದಲ್ಲಿ(ಸೀರೆಯಲ್ಲಿ) ನೋಡಿದ ತಕ್ಷಣವೆ ಲಾಠಿಯಲ್ಲಿ ಹೊಡೆಯುತ್ತಿದ್ದರು ಪೋಲಿಸರು. ಬೀದಿಯಲ್ಲಿ ನಡೆಯುವುದಕ್ಕೇ ಭಯವಾಗುತ್ತಿತ್ತು.

ಆ ಸಮಯದಲ್ಲಿ ನನ್ನ ಹಕ್ಕುಗಳನ್ನು ಅರಿತೆ. ಸಾರ್ವಜನಿಕ ಸ್ಥಳಗಳಲ್ಲಿ ಸೆಕ್ಸ್ ಮಾಡಬಾರದು. ಖಾಸಗೀ ಸ್ಥಳಗಳಲ್ಲಿ ಮಾಡಬಹುದು. ಆಗ ಪ್ರೀತಿ ನನ್ನನ್ನು ಅವಳ ಜೊತೆ ಕರೆದುಕೊಂಡು ಹೋದಳು. ಅವಳು ನನ್ನನ್ನು ಎಲ್ಲರಿಗೂ ಪರಿಚಯಿಸಿದಳು. ಹೀಗೆ ನಾನು ಲೈಂಗಿಕ ವೃತ್ತಿಯಲ್ಲಿದ್ದ ಇತರ ಕೋಥಿ ಹಾಗೂ ಹಿಜ್ರಾಗಳಿಗೆ ಸಹಾಯ ಮಾಡತೊಡಗಿದೆ.

ಹಲವು ವರ್ಷಗಳ ನಂತರ ಒಮ್ಮೆ ನನ್ನ ತಂದೆ ತಾಯಿಗೆ ಫೋನ್ ಮಾಡಿದೆ. ಅವರು ತುಂಬಾ ನೊಂದುಕೊಂಡರು. ನನ್ನಿಂದ ಅವರಿಗೆ ತುಂಬಾ ಪೇಚಾಟವಾಗುವುದರಿಂದ ಮನೆಗೆ ಬರಲಾಗುವುದಿಲ್ಲ ಎಂದು ಹೇಳಿದೆ. ಬೆಳಗಿನ ಹೊತ್ತಿನಲ್ಲಿ ಬರುವ ಬದಲು ರಾತ್ರಿ ಬರಲು ಹೇಳಿದರು. ಅವರ ಸಲಹೆಯ ಪ್ರಕಾರ ಮೊದಲ ಬಾರಿಗೆ ಮನೆಗೆ ಹೋದೆ. ರಾತ್ರಿ ಜೊತೆಯಲ್ಲಿ ಊಟ ಮಾಡಿದೆವು. ತುಂಬಾ ಹೊತ್ತು ಮಾತನಾಡಿದೆವು. ಮನೆಗೆ ಹೋಗಿದ್ದು ಬಹಳ ಸಂತೋಷವಾಯಿತು. ಆದರೆ ಬೆಳಗ್ಗೆ ಆಗುತ್ತಿದ್ದ ಹಾಗೆಯೆ ನನ್ನನ್ನು ಹಿಂದಿರುಗಿ ಹೋಗಲು ಹೇಳಿದರು.

ಎರಡನೆ ಬಾರಿ ಮನೆಗೆ ಹೋಗುವಷ್ಟರಲ್ಲಿ ನಾನು ಹಿಜ್ರಾ ಆಗಿರುವುದರ ಬಗ್ಗೆ ಜನರಿಂದ ನನ್ನ ತಂದೆ ತಾಯಿ ಕೇಳಿದ್ದರು. ನನ್ನ ತಾಯಿ ಪ್ರಶ್ನಿಸಿ ನಾನು ಕ್ಯಾಸ್ಟ್ರೇಷನ್ ಮಾಡಿಕೊಂಡಿಲ್ಲ ಎಂಬುದಕ್ಕೆ ಸಾಕ್ಷಿ ಕೇಳಿದರು. ಎಷ್ಟು ನಾಚಿಕೆಯಾದರೂ ನನ್ನ ತಾಯಿಯ ಮುಂದೆಯೆ ನನ್ನ ಪ್ಯಾಂಟನ್ನ ಬಿಚ್ಚಿ ತೋರಿಸಬೇಕಾಯಿತು. ನಾನು ಅಕ್ವಾ ಕೋಥಿ ಎಂದು ನನ್ನ ತಾಯಿಗೆ ಸಮಾಧಾನವಾಯಿತು.

ನನ್ನ ಪರಿವಾರದವರು ಬದಲಾಗುತ್ತಿರುವುದು ನನಗೀಗ ಕಾಣುತ್ತಿದೆ. ಈಗ ನಾನು ಸಂಪಾದಿಸುತ್ತಿದ್ದುದರಿಂದ ನನ್ನ ತಾಯಿ ನನ್ನನ್ನು ಮನೆಯಲ್ಲೆ ಇರಲು ಹೇಳುತ್ತಾರೆ. ಹಳ್ಳಿಗೆ ಹೋದಾಗ ಯಾರೂ ನನಗೆ ಏನು ಹೇಳುವುದಿಲ್ಲ. ಏಕೆಂದರೆ ಈಗ ನಾನು ಸಂಪಾದಿಸುತ್ತೇನೆ. ನನ್ನ ತಾಯಿ ನನ್ನನ್ನು ಫ್ಯಾನ್, ಟೇಪ್‌ರೆಕಾರ್ಡರ್ ಹಾಗೂ ಹೊಸ ಸ್ಟೌವ್ ತಂದುಕೊಡುವಂತೆ ಕೇಳುತ್ತಾರೆ. ಇದಕ್ಕೆಲ್ಲಾ ನಾನು ಅವರಿಗೆ ದುಡ್ಡು ಕೊಡುತ್ತೇನೆ. ನನ್ನ ಅಕ್ಕನ ಮಗಳಿಗೆ ಒಡವೆ ಹಾಗು ಇತರ ವಸ್ತುಗಳನ್ನೂ ಕೊಟ್ಟಿದ್ದೇನೆ.

ಲೈಂಗಿಕ ವೃತ್ತಿ ಯಾವಾಗಲೂ ಸುಲಭವಲ್ಲ. ಅನೇಕ ಸಾರಿ ಸೆಕ್ಸ್ ಮಾಡುವ ಗಿರಾಕಿಗಳು ಉತ್ಕಟ ಆನಂದ ಬಂದೊಡನೆ ಹಣ ಕೊಡದೆಯೇ ಓಡಿಹೋಗುತ್ತಾರೆ. ಗಿರಾಕಿಗಳನ್ನು ಹುಡುಕಲು ಪಾರ್ಕಿಗೆ ಹೋಗುತ್ತೇನೆ. ಒಮ್ಮೆ ಒಬ್ಬನನ್ನು ಭೇಟಿ ಮಾಡಿದೆ ಆದರೆ ಅವನು ಪೋಲಿಸಿನವನು. ಅವನೊಂದಿಗೆ ಸೆಕ್ಸ್ ಮಾಡಲು ಕರೆದ. ನಾನು ರೂ.50 ಕೇಳಿದೆ ಆತ 20 ಕೊಡುತ್ತೇನೆಂದ. ಸರಿ. ಎಂದು ನಾನು ಅವನನ್ನ ಮೌಖಿಕವಾಗಿ ಸಂಭೋಗ ಮಾಡಲು ಪ್ರಾರಂಭಿಸಿದೆ. ಕೆಲಸ ಮುಗಿದ ನಂತರ ಹೊರಟು ಹೋದ. ಅವನನ್ನು ನಿಲ್ಲಿಸಿ ಹಣ ಕೇಳಿದರೆ ನಿರಾಕರಿಸಿದ. ಠಾಣೆಗೆ ಹೋಗಿ ದೂರುಕೊಡುವುದಾಗಿ ಹೇಳಿದಾಗ ಅವನು ನಗುತ್ತ

ಆಧಾರವೆಲ್ಲಿ ಎಂದು ಕೇಳಿದ. ಆಗ ನನ್ನ ಕೈಯಲ್ಲಿದ್ದ ಕಾನ್ಡೋಮ್ ತೋರಿಸಿದೆ. ಅದು ತನ್ನದೇ ಎನ್ನುವುದಕ್ಕೆ ಆಧಾರವೆಲ್ಲಿ ಎಂದು ಹೇಳಿ ಹೊರಟುಹೋದ.

ಒಮ್ಮೆ ಒಬ್ಬ ಗಿರಾಕಿ ನನ್ನನ್ನು ಕಾರಿನಲ್ಲಿ ರಿಂಗ್ ರೋಡಿಗೆ ಕರೆದೊಯ್ದ. ಮಧ್ಯದಲ್ಲಿ ಇಳಿದು ಗಿಡಗಳ ಹಿಂದೆ ಹೋದೆವು. ತನ್ನ ಕೆಲಸವಾದ ನಂತರ ಅವನು ಮೊದಲು ಕಾರಿನ ಹತ್ತಿರ ಹೋಗಿ ಯಾರಿಗೂ ಸಂಶಯ ಬರಬಾರದೆಂದು ನನ್ನನ್ನು ಆಮೇಲೆ ಬರಲು ಹೇಳಿದ. ಆದರೆ ನಾನು ಬಂದೊಡನೆ ಕಾರನ್ನು ಶುರುಮಾಡಿ ಹೊರಟು ಹೋದ. ರಾತ್ರಿ 10 ಗಂಟೆಯಾಗಿತ್ತು. ನನ್ನ ಪ್ಯಾಂಟು ಶರ್ಟು ಎಲ್ಲಾ ಅವನ ಕಾರಿನಲ್ಲೆ ಉಳಿದು ಹೋಗಿದ್ದರಿಂದ ನನಗೆ ತುಂಬ ಭಯವಾಯಿತು. ನಾನು ನನ್ನ ಸ್ನೇಹಿತನ ಮನೆಯಲ್ಲಿದ್ದುದರಿಂದ ನಾನು ಬಟ್ಟೆ ಬದಲಾಯಿಸಲೆ ಬೇಕಿತ್ತು. ಮನೆಗೆ ಸೀರೆಯಲ್ಲಿ ಹೋಗಲಾರೆನು. ಆಗ ದಿಢೀರನೆ ಒಬ್ಬ ಪೋಲಿಸು ಬಂದು ನನ್ನನ್ನು ಹಿಡಿದನು. ನನ್ನನ್ನು ಗಿಡಗಳ ಹಿಂದೆ ಕರೆದೊಯ್ದು ಬಟ್ಟೆ ಬಿಚ್ಚಲು ಹೇಳಿದ. ಅವನಿಗೆ ನನ್ನ ಜನನಾಂಗವು ಏಳುವುದೋ ಇಲ್ಲವೋ ನೋಡಬೇಕಿತ್ತು. ಬಟ್ಟೆ ಪೂರ ತೆಗೆದಿದ್ದರಿಂದ ನಾನು ತುಂಬಾ ಹೆದರಿದ್ದೆ. ಅವನು ಲಾಠಿಯಲ್ಲಿ ನನ್ನನ್ನು ಹೊಡೆಯಲು ಪ್ರಾರಂಭಿಸಿದ. ನನ್ನನ್ನು ಬಿಡು ಎಂದು ಅವನ ಕಾಲು ಹಿಡಿದು 100 ರೂ. ಕೊಟ್ಟೆ 'ನನ್ನನ್ನು ನಗ್ನವಾಗೇ ಹೋಗಲು ಹೇಳಿದ. ಹೋಗಲು ತಿರುಗಿದಾಗ ತಿಳಿಯಿತು ಅವನು ನನ್ನೊಂದಿಗೆ ಸೆಕ್ಸ್ ಮಾಡಲು ಸಿದ್ಧನಿದ್ದ. ನನ್ನ ಹತ್ತಿರ ಕಾನ್ಡೋಮ್ ಇರಲಿಲ್ಲ. ಆಗ ನನ್ನನ್ನು ಜೋರಾಗಿ
ಸೆಕ್ಸ್ ಮಾಡಲು ಸಿದ್ಧನಿದ್ದ. ನನ್ನ ಹತ್ತಿರ ಕಾನ್ಡೋಮ್ ಇರಲಿಲ್ಲ. ಆಗ ನನ್ನನ್ನು ಜೋರಾಗಿ
ಹೊಡೆದು ನನ್ನ ಬಾಯನ್ನು ಮುಚ್ಚಿ ಗುದದ್ವಾರದಿಂದ ಸಂಭೋಗಿಸಿದ. ಅವನು ತುಂಬಾ ಬಲಶಾಲಿಯಾಗಿದ್ದರಿಂದ ನನಗೆ ತಡೆಯಲಾಗಲಿಲ್ಲ. ರಕ್ತ ಕಾರುತ್ತಿತ್ತು. ತೊಡೆಯ ಮೇಲೆ ರಕ್ತ ಹರಿಯುತ್ತಿತ್ತು. 'ಅಳುವುದು ನಿಲ್ಲಿಸು ಇಲ್ಲವಾದರೆ ಮತ್ತೆ ಹೊಡೆಯುವೆ' ಎಂದು ಕೂಗಾಡಿದ. ನನ್ನನ್ನು ಎತ್ತಿ ಬಗ್ಗಿಸಿ ಪುನಃ ಮಾಡ ತೊಡಗಿದ. ತನ್ನ ಕೆಲಸವಾದ ಮೇಲೆ ನನ್ನ ಬಟ್ಟೆಗಳನ್ನು ಅಲ್ಲಿಯೇ ಬಿಟ್ಟು ಹೋದ.

ಸಾಟ್ಲಾ ಧರಿಸಿ ಹೊರಟೆ. ತುಂಬಾ ನೋವಿನಲ್ಲಿದ್ದೆ. ದುರದೃಷ್ಟವೇನೆಂದರೆ ಇದು ಇಷ್ಟಕ್ಕೆ ಮುಗಿಯಲಿಲ್ಲ. ಒಂದು ಸಣ್ಣ ಪ್ರವಾಸಿ ವ್ಯಾನ್ ನನ್ನ ಮುಂದೆ ನಿಂತಿತು. ನನ್ನಿಂದ ಬಲವಾಗಿ ಸಿಗರೇಟು ಸೇದಿಸಿದರು. ನನಗೆ ಸ್ವಲ್ಪ ಮತ್ತು ಬಂತು ಆಗ ಖಾಲಿ ಬಾಟಲುಗಳನ್ನು ಹೊಡೆದು ನನ್ನ ಕೈಯನ್ನು ಗಾಯ ಮಾಡಿದರು. ರಕ್ತ ಸುರಿಯಿತು. ಈ ಗುರುತು ಈಗಲೂ ನನ್ನ ಕೈ ಮೇಲಿದೆ. ನನ್ನ ಜೊತೆ ಸೆಕ್ಸ್ ಮಾಡಲು ಇಚ್ಛಿಸಿದರು. ಸುಸ್ತಾಗಿತ್ತು ಕೋಪವೂ ಬಂದು 'ನನ್ನ ಜೊತೆ ಸೆಕ್ಸ್ ಮಾಡಬೇಕಾ ಹಾಗಾದರೆ ಎಲ್ಲರೂ ಮಾಡಿರಿ' ಎಂದು ಕಿರುಚಾಡಿದೆ. ಎಲ್ಲರೊಡನೆ ಹೋರಾಡಿ ಸುಸ್ತಾಗಿದ್ದೆ.

ಕಾರನ್ನು ನಿಲ್ಲಿಸಿ ನನ್ನನ್ನು ಮೈದಾನಕ್ಕೆ ಕರೆದೊಯ್ದು ನನ್ನೊಡನೆ ಸೆಕ್ಸ್ ಮಾಡಲು ಶುರು ಮಾಡಿದರು. ಬಲವಂತವಾಗಿ ಮೌಖಿಕ ಹಾಗೂ ಗುದಸಂಭೋಗ ಮಾಡಿದರು. ಕೆಲವೊಮ್ಮೆ ಒಬ್ಬೊಬ್ಬರಾಗಿ, ಕೆಲವೊಮ್ಮೆ ಅನೇಕರು. ನನಗಿನ್ನೂ ರಕ್ತ ಬರುತ್ತಿತ್ತು, ಇದಲ್ಲ ಆದ ಮೇಲೆ ಎಲ್ಲಿರುವೆ ಎಂಬ ಜ್ಞಾನವೂ ಇಲ್ಲದೆ ಅಲ್ಲೆ ಬಿದ್ದಿದ್ದೆ. ಆಗಲೇ ಬೆಳಗ್ಗೆ ಐದು ಗಂಟೆಯಾಗಿತ್ತು. ಕಷ್ಟಪಟ್ಟು ಪಕ್ಕದಲ್ಲೇ ಇದ್ದ ಹಿಜ್ರಾಗಳ ಮನೆಗೆ ಹೋದೆ. ಅವಳನ್ನು ಎಬ್ಬಿಸಿ ಒಳಗೆ ಹೋದೆ.

ಹಾಕಿಕೊಳ್ಳಲು ಒಂದು ಲುಂಗಿ ಹಾಗೂ ಶರ್ಟನ್ನು ಕೊಟ್ಟು ನನ್ನ ಮೈ ತೊಳೆದು ಶುಶ್ರೂಷೆ ಮಾಡಿ ಆಸ್ಪತ್ರೆಗೆ ಕರೆದೊಯ್ದಳು. ಇದು 2001ರಲ್ಲಿ ನಡೆದದ್ದು. ಇದಾದ ಮೇಲೆ ಮುಖ್ಯವಾದ ಒಂದು ಪಾಠವನ್ನು ಕಲಿತೆ – ಸಾಟ್ಲಾ ಧರಿಸಿ ಲೈಂಗಿಕ ವೃತ್ತಿ ಮಾಡುವುದಿಲ್ಲ. ಕೇವಲ ಹಿಜ್ರಾ ಕಾರ್ಯಕ್ರಮಗಳಲ್ಲಿ ಸೀರೆಯುಡುತ್ತೇನೆ.

ಈಗ ಜೀವನದಲ್ಲಿ ಹೀಗೆ ಮುಂದುವರೆಯುತ್ತಿದ್ದೇನೆ. ನನಗೆ ತಿಳಿದಿರುವ ಮಾಹಿತಿಯನ್ನು ಇತರ ಕೋಥಿಗಳಿಗೆ ಹಾಗೂ ಹಿಜ್ರಾಗಳೊಂದಿಗೆ ಹಂಚಿಕೊಳ್ಳುತ್ತೇನೆ. ಯಾವ ದೇವರ(ಹಿಂದೂ ಅಥವಾ ಮುಸ್ಲಿಂ) ಮೇಲೂ ಇನ್ನು ನನಗೆ ನಂಬಿಕೆ ಇಲ್ಲ. ಅವರು ಎಂದಿಗೂ ನನಗೆ ಸಹಾಯ ಮಾಡುವುದಿಲ್ಲ. ನನಗೆ ನನ್ನ ಸ್ವಂತ ಕೈಗಳಿವೆ. ಲೈಂಗಿಕ ವೃತ್ತಿ ಮಾಡುವೆ, ನನ್ನನ್ನು ನಾನು ನೋಡಿಕೊಳ್ಳಬಲ್ಲೆ.

---

## ಸ್ಮಿತಾಳ ಕಥೆ

ಕಳೆದ ಮೂರು ವರ್ಷಗಳಿಂದ ಸ್ಮಿತಾ ತನ್ನ ಗಂಡ ತೇಜಸ್ವಿಯೊಂದಿಗೆ ಇದ್ದಾಳೆ. 2002 ಮಾರ್ಚ್ ತಿಂಗಳ 18ನೆಯ ತಾರೀಖಿನಂದು ರಾತ್ರಿ 9 ಗಂಟೆಗೆ ತೇಜಸ್ವಿಯೊಂದಿಗೆ ಸ್ಯೆಂಟ್ ಮಾರ್ಕ್ಸ್ ರಸ್ತೆಯಲ್ಲಿ ಬಾಲಕಿಯರ ಪ್ರಾಥಮಿಕ ಶಾಲೆಯ ಎದುರಿಗಿರುವ ರಿಚ ರಿಚ್ ಐಸ್ಕ್ರೀಂ ಅಂಗಡಿ ಎದುರು ನಿಂತಿದ್ದಳು. ಹೊಯ್ಸಳಾ ವ್ಯಾನ್‌ನಲ್ಲಿ ಬಂದ ನಾಲ್ವರು ಪೋಲಿಸರು ಅವಳ ಜುಟ್ಟು ಹಿಡಿದು ಎಳೆದುಕೊಂಡು ಹೋದರು. ಅವಳ ಮೊಬೈಲ್ ಫೋನನ್ನು ಕಿತ್ತುಕೊಂಡರು.

ಒಬ್ಬ ಪೋಲಿಸು ತೇಜಸ್ವಿಯ ಸ್ಕೂಟರ್ ಮೇಲೆ ಕೂತು ಬಲವಂತವಾಗಿ ಕಬ್ಬನ್ ಪಾರ್ಕ್ ಪೋಲೀಸ್ ಠಾಣೆಗೆ ಕರೆದುಕೊಂಡು ಹೋದರು. ಸ್ಮಿತಾಳನ್ನು ಅದೇ ಠಾಣೆಗೆ ಹೊಯ್ಸಳದಲ್ಲಿ ಕರೆದುಕೊಂಡು ಹೋಗುತ್ತಿದ್ದಾಗ ಅವಳ ಪಕ್ಕದಲ್ಲಿ ಕುಳಿತ ಇಬ್ಬರು ಪೋಲಿಸರು ಅವಳ ಮೊಲೆಗಳನ್ನು ಮುಟ್ಟಿ ಕಿರುಕುಳ ಕೊಟ್ಟರು.

ಪೋಲೀಸ್ ಠಾಣೆಗೆ ತಲುಪುತ್ತಲೇ ಅವಳನ್ನು ಗಂಡನ ಜೊತೆ ಒಂದು ರೂಮಿನೊಳಕ್ಕೆ ಕೂಡಿದರು. ಹದಿನೈದು–ಇಪ್ಪತ್ತು ಜನ ಪೋಲಿಸರು ಸೇರಿ, ಆ ಸಮಯದಲ್ಲಿ ಹಾಜರಿದ್ದ ತಮ್ಮ ಹಿರಿಯ ಅಧಿಕಾರಿಯ (ಸರ್ಕಲ್ ಇನ್ಸ್‌ಪೆಕ್ಟರ್ ಮುನಿರತ್ನಮ್ ನಾಯ್ಡು) ಎದುರಿನಲ್ಲಿ ಅವಳನ್ನು ಬೆತ್ತಲೆಗೊಳಿಸಿದರು. ಸ್ಮಿತಾಳ ವರ್ಣನೆಯ ಪ್ರಕಾರ ಆ ಅಧಿಕಾರಿಯು "ಸುಮಾರು ಐವತ್ತು ವರ್ಷದ ಸುಪಾಸಿನಲ್ಲಿರುವ, ಗೋಧಿ ಮೈಬಣ್ಣ, ಐದಡಿ ನಾಲ್ಕಿಂಚು ಎತ್ತರವಿರುವ ದಢೂತಿ ಮನುಷ್ಯ."

ಅಲ್ಲಿ ಸೇರಿದ್ದ ಎಲ್ಲ ಪೋಲಿಸರು ಅವಳನ್ನು ಸುತ್ತುವರೆದು ಅವಳ ಮೈಯ್ಯನ್ನೆಲ್ಲಾ ಚೂರು ಬಿಡದಂತೆ ಮುಟ್ಟಿ, ಅವಳ ತೊಡೆಗಳನ್ನು ಅಗಲಿಸುವಂತೆ ಬೆದರಿಸಿ ಗುಪ್ತಾಂಗಗಳನ್ನೂ ಮುಟ್ಟಿದರು.

ಕಿರುಕುಳ ಅಲ್ಲಿಗೇ ನಿಲ್ಲಲಿಲ್ಲ. ಅವರಲ್ಲಿ ಕೆಲವರು ತಮ್ಮ ಲಾಠಿಯಿಂದ ಸ್ಮಿತಾಳ ತಲೆ, ಕೈ, ತೊಡೆ, ಭುಜದ ಮೇಲೆ ಬಲವಾಗಿ ಹೊಡೆದರು. ಕೆಲವರು ಅವಳ ಕೂದಲನ್ನು ಬೋಳಿಸುವ ಪ್ರಯತ್ನವನ್ನೂ ಮಾಡಿದರು. ಸ್ಮಿತಾ ಅವರೆಲ್ಲರನ್ನು ಪದೇ ಪದೇ ಬಿಟ್ಟುಬಿಡಿರೆಂದು ಕಾಲಿಗೆ

ಬಿದ್ದು ಕೇಳಿಕೊಂಡಳು. "ಖೋಜಾ" ಇತ್ಯಾದಿ ಅತೀ ಕೀಳು ಮಟ್ಟದ ಬೈಗುಳಗಳನ್ನು ಉಪಯೋಗಿಸುತ್ತಾ "ಹಿಂದಿನಿಂದ ಮಾಡಿಸಿಕೊಳ್ಳಕ್ಕೆ ಬಂದೆಯಾ?" "ಯಾರದನ್ನ ಚೀಪಲಿಕ್ಕೆ ಬಂದೆ?" "ಜನಕ್ಕೆ ನಿನ್ನಿಂದ ಏಡ್ಸ್ ಬರುತ್ತೆ. ಒಂದು ದಿನ ನೀನೂ ಏಡ್ಸ್ ನಿಂದ ಸಾಯುತ್ತೀ... ಛಕ್ಕಾ... ನಿನ್ನಮ್ಮನಿಗೆ ಮಾಡ್ತೀನಿ ನೋಡು" ಎಂದರು.

ತೇಜಸ್ವಿಯನ್ನೂ ಬೆತ್ತಲೆಗೊಳಿಸಿ ಅವನ ಮೇಲೆ ದೈಹಿಕ ಹಲ್ಲೆ ಮಾಡಿದರು. ಅವನ ಕಪಾಳಕ್ಕೆ ಹೊಡೆದು, ಮೈ ಮೇಲೆ ಲಾಠಿಯಿಂದ ಬಾರಿಸಿ ಬೂಟುಕಾಲಿನಿಂದ ಅವನನ್ನು ಒದ್ದರು. ಅವನನ್ನೂ ಅತೀ ಕೀಳು ಮಟ್ಟದ ಭಾಷೆ ಉಪಯೋಗಿಸಿ ಬೈದರು.

ಅವರಿಬ್ಬರನ್ನು ಬಿಡಗಡೆಗೊಳಿಸಿದ್ದು ಸುಮಾರು ಹತ್ತು ಗಂಟೆಗೆ, "ಸಂಗಮ"ದಲ್ಲಿ ಕೆಲಸ ಮಾಡುತ್ತಿರುವ ಫಮಿಲಾ ಠಾಣೆಗೆ ಬಂದು ಮಾತಾಡಿದ ನಂತರವೇ. ಆಗಲೂ ಸ್ಮಿತಾಳಿಗೆ ಈ ವಿಷಯದ ಬಗ್ಗೆ ಬೇರೆಲ್ಲೂ ಮಾತಾಡದಂತೆ ಬೆದರಿಸಿದರು. ತನ್ನ ಗಂಡನ ಸುರಕ್ಷೆಯ ಬಗ್ಗೆ ಚಿಂತಿತಳಾಗಿದ್ದ ಸ್ಮಿತಾ ತಕ್ಷಣವೇ ಆಗಿನ ಡೈರೆಕ್ಟರ್ ಜನರಲ್ ಆಫ್ ಪೋಲಿಸ್ – ವಿ.ವಿ. ಭಾಸ್ಕರ್ ಮತ್ತು ಕರ್ನಾಟಕ ಹೈಕೋರ್ಟಿನ ಮುಖ್ಯ ನ್ಯಾಯಾಧೀಶರಿಗೆ ಒಂದು ಪತ್ರ ಬರೆದು ಫ್ಯಾಕ್ಸ್ ಮಾಡಿದಳು.

ಮಾರನೇ ದಿನ ಪೋಲೀಸರು ಸ್ಮಿತ ಮತ್ತು ಅವಳ ಗಂಡನನ್ನು 'ಇಮ್ಮಾರಲ್ ಟ್ರಾಫಿಕಿಂಗ್ (ಪ್ರಿವೆನ್‌ಶನ್) ಆಕ್ಟ್"ನ ಅಡಿಯಲ್ಲಿ ಬುಕ್ ಮಾಡಿದ್ದರೆಂಬ ಸಂಗತಿ ತಿಳಿಯಿತು. ತೇಜಸ್ವಿಯನ್ನು ಹತ್ತೊಂಭತ್ತನೇ ತಾರೀಖು ಕೋರ್ಟಿನಲ್ಲಿ ಹಾಜರುಪಡಿಸಿದಾಗ ಅವನು ಪೋಲಿಸರು ತನ್ನನ್ನು ಚಿತ್ರ ಹಿಂಸೆಗೆ ಒಳಪಡಿಸಿದ್ದರ ಬಗ್ಗೆ ಹೇಳಿದ. ಮ್ಯಾಜಿಸ್ಟ್ರೇಟರು ಅವನನ್ನು ವೈದ್ಯಕೀಯ ಪರೀಕ್ಷೆಗೊಳಪಡಿಸುವಂತೆ ಆರ್ಡರ್ ಮಾಡಿ, ಸರ್ಕಲ್ ಇನ್ಸ್‌ಪೆಕ್ಟರ್ ಮುನಿರತ್ನಂ ನಾಯ್ಡು ಅವರೂ ಮಾರನೇ ದಿನ ಹಿಯರಿಂಗ್ ಸಮಯದಲ್ಲಿ ಹಾಜರಿರುವಂತೆ ತಿಳಿಸಿದರು. ಪರೀಕ್ಷೆಯ ವರದಿಯಲ್ಲಿ ತೇಜಸ್ವಿಯ ಎಡಗೈ, ಎಡ ಭುಜದ ಮೇಲೆ ಬಹಳ ಗಾಯಗಳಾಗಿದ್ದುದು ಬಹಿರಂಗವಾಯಿತು. ಅವನನ್ನು ತಕ್ಷಣ ಜಾಮೀನಿನ ಮೇಲೆ ಬಿಡುಗಡೆಗೊಳಿಸಲಾಯಿತು. ಪೋಲೀಸರಿಂದ ತಲೆ ತಪ್ಪಿಸಿಕೊಳ್ಳಲು ಸ್ಮಿತಾ ಕೆಲ ದಿನ ತಲೆಮರೆಸಿಕೊಂಡರೂ ಕೆಲ ವಾರಗಳ ನಂತರ ಅವಳನ್ನು ಪೋಲಿಸರು ಮತ್ತೊಮ್ಮೆ ಅವಳು ವೇಶ್ಯಾವಾಟಿಕೆಯಲ್ಲಿ ತೊಡಗಿದ್ದಳೆಂಬ ಸುಳ್ಳು ಆಪಾದನೆಯ ಮೇಲೆ ಹಿಡಿದು ಒಂದು ವಾರ ಲಾಕಪ್ಪಿನಲ್ಲಿ ಹಾಕಿದರು. ನಿರೀಕ್ಷಣಾ ಜಾಮೀನನ್ನು ಪಡೆಯಲು ಅವಳ ಬಳಿ ಇದ್ದಬದ್ದ ಪುಡಿಗಾಸನ್ನೆಲ್ಲಾ ಖರ್ಚು ಮಾಡಬೇಕಾಯಿತು.

ಈ ಘಟನೆ ಸಮುದಾಯವನ್ನು ಅಲ್ಲಾಡಿಸಿಬಿಟ್ಟಿತು. ಅಲ್ಲಿಂದ ಮುಂದಕ್ಕೆ ಬೆಂಗಳೂರಿನ ಹಿಜ್ರಾ ಕೋಥಿ ಲೈಂಗಿಕ ಕಾರ್ಮಿಕರ ಜೊತೆ ಪೋಲೀಸರ ನಡವಳಿಕೆಯಲ್ಲಿ ಸ್ವಲ್ಪ ಮಟ್ಟಿಗೆ ಸುಧಾರಣೆ ಕಂಡುಬಂದರೂ, ಕೇಸಿನ ಸಂಬಂಧವಾಗಿ ಸ್ಮಿತಾಳಿಗೆ ಇನ್ನೂ ಕೋರ್ಟಿನ ಮೆಟ್ಟಿಲು ಹತ್ತುವುದು ನಿಂತಿಲ್ಲ. ಅವಳ ಕೇಸನ್ನು 'ಸಂಗಮ'ದ ವಕೀಲರು ಪ್ರತಿನಿಧಿಸುತ್ತಿದ್ದಾರೆ.

ಇಲ್ಲಿ ದಾಖಲಾಗಿರುವ ಘಟನೆಗಳು ಆಘಾತಕಾರಿಯಾಗಿವೆ ಮತ್ತು ಕ್ರೂರವಾಗಿವೆ. ಸ್ಮಿತಾ ಮತ್ತು ಸಚಿನ್‌ರನ್ನೊಳಗೊಂಡ ಘಟನೆಗಳನ್ನು ಓದಿದರೆ ಇಂತಹಾ ಹಿಂಸೆ ಎಲ್ಲೋ ಅಪರೂಪಕ್ಕೆ

ನಡೆಯುವಂಥಾದ್ದು ಅನ್ನಿಸಬಹುದೇನೋ. ಆದರೆ ಇವು ವಿರಳವೇನಲ್ಲ. ದಿನನಿತ್ಯ ಹಿಜ್ರಾ-ಕೋಥಿ ಲೈಂಗಿಕ ಕಾರ್ಮಿಕರ ಜೊತೆ ಬೆಂಗಳೂರಿನಲ್ಲೆಡೆ ಈ ರೀತಿಯ ಘಟನೆಗಳು ಸಂಭವಿಸುತ್ತಲೇ ಇರುತ್ತವೆ. ಇವುಗಳ ಹಿಂದೆ ಯಾವಾಗಲೂ ಪೋಲೀಸರೇ ಇರುವುದಿಲ್ಲ, ಸಾರ್ವಜನಿಕರೂ ಇಂಥ ಘಟನೆಗಳಿಗೆ ಇಂಬು ಕೊಟ್ಟಿರುವ ಸಂದರ್ಭಗಳೂ ಉಂಟು. ಈ ಹಿಂಸೆಯ ಮೂಲವಿರುವುದು, ಗಂಡು-ಹೆಣ್ಣೆಂಬ ಸಮಾಜದ ದ್ವಿವಿಂಗಡಣೆಯನ್ನು ಉಲ್ಲಂಘಿಸುವ ಹಿಜ್ರಾಗಳ ಭಿನ್ನ ಲೈಂಗಿಕತೆ ಮತ್ತು ಲಿಂಗ ಅನನ್ಯತೆ ಕುರಿತ ಪೂರ್ವಾಗ್ರಹದಲ್ಲಿ. ಬೇಕಾಬಿಟ್ಟಿಯಾಗಿ, ಇಚ್ಛಾನುಸಾರವಾಗಿ ನಡೆಯುವ ಹಿಂಸೆಯು, ಮುಖ್ಯವಾಹಿನಿ ಅಂದರೆ ಪರಲಿಂಗಕಾಮಿ ಸಮಾಜವನ್ನು ಕಾಯ್ದುಕೊಳ್ಳಲು ಇರುವ ವ್ಯವಸ್ಥಿತ ಕಾವಲುಗಾರಿಕೆಯ ಭಾಗವಾಗಿದೆ ಎಂಬುದನ್ನು ಸೂಚಿಸುತ್ತದೆ.

ಹೀನಾಯಿಸಲು, ಅವಮಾನಿಸಲು ಮತ್ತು ಕಿರುಕುಳ ನೀಡಲು ಲೈಂಗಿಕ ಹಿಂಸೆಯನ್ನು ಹೇಗೆ ಬಳಸಿಕೊಳ್ಳಲಾಗುತ್ತದೆ ಎಂಬುದನ್ನು ಮುಂದೆ ಬರುವ ಹಿಜ್ರಾ ಮತ್ತು ಕೋಥಿ ಲೈಂಗಿಕ ಕಾರ್ಮಿಕರ ಕಥಾನಕಗಳು ವಿಷದಪಡಿಸುತ್ತವೆ. ಹಿಜ್ರಾ ಮತ್ತು ಲೈಂಗಿಕ ಕಾರ್ಮಿಕರನ್ನು ನಿಯಂತ್ರಿಸುವ ವಿಧಾನವಾಗಿ ಲೈಂಗಿಕ ಹಿಂಸೆಯೇ ಮುಖ್ಯವಾಗುವುದಕ್ಕೆ ಕಾರಣಗಳೇನೆಂಬುದನ್ನು ಅರ್ಥಮಾಡಿಕೊಳ್ಳಲು ಈ ನಿರೂಪಣೆಗಳು ಅವಕಾಶಮಾಡಿಕೊಡುತ್ತವೆ. ಕಥಾನಕಗಳನ್ನು ಹಿಂಸೆಯ ಸಂದರ್ಭ ಹಾಗು ಹಿಂಸೆ ಜರುಗುವ ಸ್ಥಳಕ್ಕೆ ಅನುಗುಣವಾಗಿ ವಿಂಗಡಿಸಲಾಗಿದೆ. ಕಿರುಕುಳ ಮತ್ತು ದೌರ್ಜನ್ಯದ ಸ್ವರೂಪವು ಪಾರ್ಕುಗಳು ಮತ್ತು ಬೀದಿಗಳಂತಹ ಸಾರ್ವಜನಿಕ ಸ್ಥಳಗಳಿಂದ ಹಿಡಿದು ಜೈಲು ಮತ್ತು ಪೋಲೀಸ್ ಠಾಣೆಗಳಂತಹ ರಕ್ಷಣಾ ಸಂಸ್ಥೆಗಳವರೆಗೂ ಬೇರೆ ಬೇರೆಯಾಗಿದೆ. ಮನೆಯಂತಹ ಖಾಸಗಿ ಸ್ಥಳವೂ ಹಿಂಸೆಯಿಂದ ಮುಕ್ತವಾಗಿಲ್ಲ ಎಂಬುದನ್ನೂ ಸಹ ಈ ಕಥಾನಕಗಳಿಂದ ತಿಳಿದುಕೊಳ್ಳಬಹುದಾಗಿದೆ.

ಹಿಜ್ರಾ ಮತ್ತು ಕೋಥಿ ಲೈಂಗಿಕ ಕಾರ್ಮಿಕರ ಮೇಲೆ ನಡೆಯುವ ಪ್ರಭುತ್ವ ಮತ್ತು ಸಾಮಾಜಿಕ ಹಿಂಸೆಯನ್ನು ಈ ಕೆಳಗಿನಂತೆ ವಿಂಗಡಿಸಲಾಗಿದೆ.

- ಸಾರ್ವಜನಿಕ ಸ್ಥಳಗಳಲ್ಲಿ ಪೋಲೀಸರಿಂದಾಗುವ ಕಿರುಕುಳ
- ಮನೆಯಲ್ಲಿ ನೀಡಲಾಗುವ ಕಿರುಕುಳ
- ಹಿಡಿಯಲು ಬಲೆ ಬೀಸುವ ಪೋಲೀಸರು
- ಪೋಲೀಸ್ ಠಾಣೆಗಳಲ್ಲಿ ನೀಡುವ ದೌರ್ಜನ್ಯ/ ಕಿರುಕುಳ
- ಜೈಲುಗಳಲ್ಲಿ ಅತ್ಯಾಚಾರ

### *3.2 ಸಾರ್ವಜನಿಕ ಸ್ಥಳಗಳಲ್ಲಿ ಪೋಲೀಸರಿಂದಾಗುವ ಕಿರುಕುಳ*

ಕುಟುಂಬದ ಸದಸ್ಯರ ತೀವ್ರ ಅಸಹನೆಗೊಳಗಾಗುವ ಹಿಜ್ರಾ ಮತ್ತು ಕೋಥಿಗಳು ಸಾರ್ವಜನಿಕ ಸ್ಥಳಗಳಾದ ಪಾರ್ಕುಗಳು ಅಥವಾ ಕೆಲ ನಿಗದಿತ ರಸ್ತೆಗಳಲ್ಲಿ ತಮ್ಮ ಗಿರಾಕಿಗಳು, ಲೈಂಗಿಕ ಸಹಭಾಗಿಗಳು ಅಥವಾ ಪ್ರೇಮಿಗಳನ್ನು ಭೇಟಿ ಮಾಡುತ್ತಾರೆ. ಸ್ವಂತ ಮನೆ/ ಜಾಗ ಅಥವಾ ಕಾರ್ಯಸ್ಥಳ ಅವರ ಕೈಗೆಟುಕದು. ಹೀಗಾಗಿ ಅವರ ಲೈಂಗಿಕ ಚಟುವಟಿಕೆಗಳು ಸಾರ್ವಜನಿಕ ಶೌಚಾಲಯಗಳಲ್ಲೋ ಅಥವಾ ಪಾರ್ಕುಗಳಲ್ಲೋ ಗುಪ್ತವಾಗಿ ನಡೆಯುತ್ತವೆ. ಇದರಿಂದ ಅವರು ಹೆಚ್ಚಾಗಿ ಪೋಲೀಸರ ಕಿರುಕುಳಕ್ಕೆ ಸುಲಭ ಬೇಟೆಗಳಾಗುತ್ತಾರೆ.

## ಸತ್ಯಕಥೆಗಳು

* **ಗೌತಂ**. ಇಪ್ಪತ್ತೊಂದು ವಯಸ್ಸಿನ ಅಂಗವಿಕಲ ಕೋಥಿ : "ಒಂದು ಸಂಜೆ, ಸುಮಾರು ಎಂಟೂ ಕಾಲು ಘಂಟೆಯ ಹೊತ್ತಿಗೆ ಮೆಜೆಸ್ಟಿಕ್ ಬಸ್ ನಿಲ್ದಾಣದಲ್ಲಿ (ಕೆಂಪೇಗೌಡ ಬಸ್ ನಿಲ್ದಾಣ, ಬೆಂಗಳೂರಿನ ಮುಖ್ಯ ಬಸ್ ನಿಲುಗಡೆ ಸ್ಥಳ) ಬಾಡಿಗೆ ಮನೆ ಕೊಡಿಸುತ್ತೇನೆ ಎಂದು ಹೇಳಿದ ಸ್ನೇಹಿತನ ದಾರಿ ಕಾಯುತ್ತ ಕುಳಿತಿದ್ದೆ. ನಾನಿದ್ದದ್ದು ಒಬ್ಬನೇ, ಯಾರನ್ನೂ ನನ್ನಡೆಗೆ ಸೆಳೆಯುವ (ಸಾಲಿಸಿಟಿಂಗ್) ಪ್ರಯತ್ನವನ್ನೂ ಮಾಡುತ್ತಿರಲಿಲ್ಲ. ಸಾಮಾನ್ಯ ಉಡುಪಿನಲ್ಲಿದ್ದ ಇಬ್ಬರು ನನ್ನೆಡೆಗೆ ಬಂದರು. ನನಗೆ ಅವರು ಪೋಲಿಸರು ಎಂಬ ಭಾವನೆ ಬರದಿದ್ದುದರಿಂದ ಅವರನ್ನು ವಾಚ್‌ಮ್ಯಾನ್ಗಳು ಎಂದು ತಪ್ಪು ತಿಳಿದೆ. ಅವರಿಬ್ಬರೂ ಅಲ್ಲಿದ್ದ ಜನರನ್ನು ಎಬ್ಬಿಸಿ ಕಳಿಸುತ್ತಿದ್ದರು. ನಾನಿದ್ದಡೆಗೆ ಬಂದು ಇಲ್ಲೇಕೆ ಕುಳಿತಿದ್ದೀ ಎಂದು ಕೇಳಿದರು. ನಾನು ನನ್ನ ಸ್ನೇಹಿತನಾಗಿ ಕಾಯುತ್ತಿದ್ದೇನೆ ಎಂದು ಹೇಳಿದೆ. ಇಬ್ಬರಲ್ಲಿ ಚಿಕ್ಕ ವಯಸ್ಸಿನವನೊಬ್ಬ ನನ್ನ ತಾಯಿಯ ಬಗ್ಗೆ ಹೊಲಸಾಗಿ ಮಾತನಾಡುತ್ತಾ ಬಯ್ಯಲು ಶುರು ಮಾಡಿದ. ನನಗೆ ಸಹಿಸಲಾಗದೆ, ಅವನು ನನ್ನನ್ನು ತಕ್ಕ ಮರ್ಯಾದೆಯಿಂದ ಮಾತಾಡಿಸಬೇಕೆಂದು ಹೇಳಿದೆ. ಅವರು ನಾನಂದುಕೊಂಡಂತೆ ವಾಚ್‌ಮ್ಯಾನ್‌ಗಳಲ್ಲವಾದ್ದರಿಂದ ತಾವು ಯಾರು ಎನ್ನುವ ಪ್ರಶ್ನೆ ಕೇಳಿದೆ. ಅಸಭ್ಯ ಬೈಗುಳಗಳು ನಿಲ್ಲಲಿಲ್ಲ. ನಾನು ಇದನ್ನು ಪ್ರತಿಭಟಿಸಿದೆ. ಒಬ್ಬ ನನ್ನ ಕಾಲರ್ ಹಿಡಿದು ಬಲವಾಗಿ ಜಗ್ಗಿದ. ನಾನು ಆಯ ತಪ್ಪಿ ನೆಲಕ್ಕೆ ಬಿದ್ದೆ. ಆಗ ಅವರಿಗೆ ನಾನು ಅಂಗವಿಕಲ ಎನ್ನುವ ಸಂಗತಿ ಅರಿವಾಯಿತು. ನಾನು ಅಂಗವಿಕಲ ಮತ್ತು ನಾನು ಯಾವ ತಪ್ಪನ್ನೂ ಮಾಡಿಲ್ಲವೆಂದು ತಿಳಿದರೂ ಇಬ್ಬರು ಪೋಲಿಸರೂ ಹೊಡೆಯಲು ಶುರು ಮಾಡಿದರು. ಕೆಟ್ಟ ಮಾತುಗಳನ್ನಾಡುತ್ತಾ ನನ್ನನ್ನು "ಡಿಡಿ ನೈನ್" (ಹಿಜ್ರಾ, ಕೋಥಿಗಳ ಮತ್ತು ಸಲಿಂಗಕಾಮಿಗಳ ಬಗ್ಗೆ ಬಳಕೆಯಲ್ಲಿರುವ ಕೀಳು ಬೈಗುಳ) ಎಂದೆಲ್ಲ ಹೀಯಾಳಿಸಿದರು. ಆ ಪದವನ್ನು ನಾನು ತುಂಬಾ ದ್ವೇಷಿಸುತ್ತೇನೆ. ನಾನು ಚಪ್ಪಾಳೆ ತಟ್ಟಿ "ಹೌದು ನಾನು ನೈನ್. ನಾನೇನು ಸೆಕ್ಸ್‌ವರ್ಕ್ ಮಾಡುತ್ತಿರಲಿಲ್ಲ. ಸ್ನೇಹಿತನಿಗಾಗಿ ಕಾಯುತ್ತಿದ್ದೆ" ಎಂದೆ.

ನಂತರ ಅವನನ್ನು ಉಪ್ಪಾರಪೇಟೆ ಪೊಲೀಸ್ ಠಾಣೆಗೆ ಕರೆದೊಯ್ದರು. ಅಲ್ಲಿ ಪೋಲಿಸರ ಕಿರುಕುಳದ ಬಗ್ಗೆ ಗೌತಮ್ ದೂರು ನೀಡಿದ.

* **ಐಶ್ವರ್ಯ**. ಇಪ್ಪತ್ಮೂರು ವಯಸ್ಸಿನ ಹಿಜ್ರಾ : "ನಾನು ಬಸ್ ನಿಲ್ದಾಣದಲ್ಲಿ ಬಸ್ ಬರುವುದನ್ನು ಕಾಯುತ್ತಿದ್ದೆ. ಹಠಾತ್ತನೆ ಒಂದು ಹೊಯ್ಸಳ ವ್ಯಾನ್ ಬಂದು ನಮ್ಮ ಮುಂದೆ ನಿಂತಿತು. ಅದರಲ್ಲಿದ್ದ ಪೋಲಿಸರು ಬೇರೆ ಹೆಣ್ಣು ಲೈಂಗಿಕ ಕಾರ್ಮಿಕರು, ಹಿಜ್ರಾ ಮತ್ತು ಕೋಥಿ ಲೈಂಗಿಕ ಕಾರ್ಮಿಕರಿಂದ ಹಣ ವಸೂಲು ಮಾಡುತ್ತಿದ್ದರು. ನನ್ನನ್ನೂ ಹಣ ಕೇಳಿದರು. ನನ್ನ ಬಳಿ ಬಸ್ಸಿನಲ್ಲಿ ಮನೆಗೆ ಹೋಗಲು ಮಾತ್ರ ಹಣ ಇದೆ ಎಂದು ಹೇಳಿದೆ. ಹಾಗನ್ನುತ್ತಿದ್ದಂತೆ, ಅವರಲ್ಲೊಬ್ಬ ನಾನು ಧರಿಸಿದ್ದ ವಿಗ್ ಅನ್ನು ಕಿತ್ತೆಸೆದು ನನ್ನನ್ನು ವ್ಯಾನಿನೊಳಕ್ಕೆ ತಳ್ಳಿದ. ಅದರಲ್ಲಿದ್ದವರು ನನ್ನನ್ನು ನೋಡಿ ನಗುತ್ತಿದ್ದರು. ನನ್ನ ಬ್ಲೌಸಿನಲ್ಲಿ ಇರುವುದು ನಿಜವಾದ ಮೊಲೆಗಳೊ, ಇಲ್ಲ ಕೃತಕವಾದವೋ ಎಂದು ಕೇಳಿದರು. ಅವು ಆರ್ಟಿಫಿಷಿಯಲ್ ಎಂದು

ನಾನೆಷ್ಟು ಹೇಳಿದರೂ ಕೇಳದೆ ಕೆಲವರು ಅವನ್ನು ಮುಟ್ಟಿ, ಹಿಸುಕಿ ನೋಡಲು ಶುರು ಮಾಡಿದರು. ನಾನು ಹಣ ಕೊಡಬೇಕೆಂದೂ, ಕೊಡದಿದ್ದ ಪಕ್ಷದಲ್ಲಿ ನನ್ನನ್ನು ಕಳ್ಳತನದ ಕೇಸಿನಲ್ಲಿ ಸಿಕ್ಕಿಹಾಕಿಸುವುದಾಗಿಯೂ ಬೆದರಿಸಿದರು. ನಾನು ಅವರ ಕಾಲಿಗೆ ಬಿದ್ದು ನಾನು ಬಡವಿ, ಊಟಕ್ಕಾಗಿ ಲೈಂಗಿಕ ಕಾರ್ಮಿಕಳಾಗಿದ್ದೇನೆ ಎಂದು ಹೇಳಿದ್ದನ್ನು ಅವರು ಕೇಳಲೇ ಇಲ್ಲ. ಕೊನೆಗೆ ನನ್ನನ್ನು ಕಬ್ಬನ್ ಪಾರ್ಕ್ ಪೋಲಿಸ್ ಠಾಣೆಯಲ್ಲಿ ಮೂರು ದಿನ ಇರಿಸಿದರು."

*ಲಕ್ಷ್ಮಮ್ಮ, ಮಧ್ಯ ವಯಸ್ಕ ಲೈಂಗಿಕ ಕಾರ್ಮಿಕರು : "ನಾನು ಲೈಂಗಿಕ ಕಾರ್ಯ ಮಾಡುತ್ತೇನೆ. ರಸ್ತೆ ಮೇಲೆ ಭಿಕ್ಷೆ ಬೇಡುತ್ತೇನೆ. ಅಲ್ಲೇ ಮಲಗುತ್ತೇನೆ. ಒಮ್ಮೆ ಒಂದು ಪಾರ್ಕಿನಲ್ಲಿ ಕುಳಿತಿರುವಾಗ ಪೋಲಿಸಿನವನೊಬ್ಬ ಬಲಪ್ರಯೋಗ ಮಾಡಿ ನನ್ನನ್ನು ರಸ್ತೆಗೆ ದರದರ ಎಳೆಯುವ ಪ್ರಯತ್ನ ಮಾಡಿದ. ನಾನು ಅವನೆಡೆಗೆ ಕಲ್ಲು ತೂರಿದೆ. ಅವನನ್ನು ಬಯ್ಯುತ್ತಾ ಬೇರೆಯವರ ಗಮನ ಸೆಳೆಯಲು ಜೋರಾಗಿ ಕೂಗಹತ್ತಿದೆ. ಆಗ ಅವನು ಓಡಿ ಹೋದ. ಇನ್ನೊಮ್ಮೆ ನಾನು ಚಿನ್ನಸ್ವಾಮಿ ಕ್ರೀಡಾಂಗಣದ ಬಳಿ ನಿಂತಿದ್ದಾಗ ಹೊಯ್ಸಳ ವ್ಯಾನ್ ಬಂದು, ಅದರಲ್ಲಿದ್ದ ಪೋಲಿಸರು ನನ್ನನ್ನು ದೋಚಲು ಪ್ರಯತ್ನಿಸಿ ಕಡೆಗೆ ನನ್ನ ಔಷಧಗಳನ್ನು ಕಿತ್ತುಕೊಂಡರು".

### 3.3 ಮನೆಯಲ್ಲಿ ನೀಡಲಾಗುವ ಕಿರುಕುಳ

ಸಾರ್ವಜನಿಕ ಸ್ಥಳಗಳಲ್ಲಿ ಹಿಜ್ರಾ ಮತ್ತು ಕೋಥಿಗಳು ಅತಿ ಹಿಂಸೆಗೊಳಗಾಗುವುದು ನಿಜವಾದರೂ, ಮನೆಯಂಥಾ ಖಾಸಗೀ ಸ್ಥಳಗಳೂ ಅವರಿಗೆ ರಕ್ಷಣೆಯನ್ನೊದಗಿಸಲಾರವು ಎನ್ನುವುದೂ ಸತ್ಯ. ಬಹುತೇಕ ಹಿಜ್ರಾ ಮತ್ತು ಕೋಥಿಗಳಿಗೆ ಮನೆಯ/ ಕುಟುಂಬದ ಚೌಕಟ್ಟನ್ನು ದಾಟಿ, ಇದ್ದ ಪುಡಿಗಾಸಿನಲ್ಲಿ ತಮ್ಮದೇ ಒಂದು ಜಾಗವನ್ನು ಹುಡುಕಿಕೊಳ್ಳುವುದು ಅತೀ ಕಷ್ಟಕರ. ಮನೆ ಎಂಬ ಜಾಗ ಬೇರೆಯವರಂತೆ ಅವರಿಗೂ ಸುರಕ್ಷಾ ಭಾವನೆಯನ್ನೊದಗಿಸುವ ತಾಣವಾಗಬೇಕು.

ಆದರೆ, ದುರದೃಷ್ಟಕರ ಸಂಗತಿಯೆಂದರೆ, ಹಿಜ್ರಾ ಮತ್ತು ಕೋಥಿಗಳು ಯಾವಾಗಲೂ ಪೋಲಿಸರ ಹದ್ದಿನ ಕಣ್ಣಿಗೆ ಬೀಳುವುದರಿಂದ, ಅವರ ಸ್ವಂತ ಜಾಗ ಅಥವಾ ಮನೆಯ ಒಳಗಡೆಯೂ ಪೋಲಿಸರು ನುಗ್ಗಿ ಸಾರ್ವಜನಿಕ ಸ್ಥಳಗಳಲ್ಲಿ ಮಾಡುವಂತೆ ಕಿರುಕುಳಕ್ಕೆ ಒಳಪಡಿಸುತ್ತಾರೆ.

ವೇಶ್ಯಾವಾಟಿಕೆ ನಡೆಸುತ್ತಿದ್ದಳು ಎಂಬ ಸುಳ್ಳು ಆಪಾದನೆಯ ಮೇಲೆ ಪೋಲಿಸರು ಹಿಜ್ರಾಗಳ ಮನೆಯೊಂದರ ಮೇಲೆ ದಾಳಿ ಮಾಡಿದರು. ನಡೆದ ಘಟನೆ ಹೀಗಿದೆ.

* **ಸ್ವಾತಿ**ಯ ಮನೆಯವರು ಅವಳು ಹಿಜ್ರಾ ಎಂಬ ಸಂಗತಿಯನ್ನು ಒಪ್ಪಿಕೊಂಡಿದ್ದಾರೆ. ಅವಳು ಕಳೆದ ಒಂದು ವರ್ಷದಿಂದ ಅವಳ ತಂದೆ ತಾಯಿಗಳ ಜೊತೆಯಲ್ಲೇ ಬದುಕುತ್ತಿದ್ದಾಳೆ.

"ಒಂದು ದಿನ ನನ್ನ ಮಿತ್ರರಾದ ಸ್ಮಿತ, ಪ್ರೀತಿ, ಲಾರೆನ್ಸ್(ಸ್ವಾತಿಯ ಬಾಯ್ ಫ್ರೆಂಡ್), ತೇಜಸ್ವಿ (ಸ್ಮಿತಾಳ ಗಂಡ), ಥಾಮಸ್(ಪ್ರೀತಿಯ ಬಾಯ್ ಫ್ರೆಂಡ್), ರೂಪ, ಅಜೇಶ್ ಮತ್ತು ಶಶಿ, ಇವರನ್ನು ನನ್ನ ಮನೆಗೆ ಚಿಕ್ಕ ಪಾರ್ಟಿಗಾಗಿ ಆಹ್ವಾನಿಸಿದ್ದೆ. ಬೆಳಗ್ಗಿನಿಂದ ಎಲ್ಲಾ ಸರಿಯಾಗೇ ಇತ್ತು. ಸಂಜೆಯ ಆರು ಘಂಟೆಯ ಹೊತ್ತಿಗೆ, ಹಠಾತ್ತನೆ ಬ್ಯಾಟರಾಯನಪುರ

ಪೋಲೀಸ್ ಸ್ಟೇಷನ್ನಿನಿಂದ ಸುಮಾರು ಎಂಟು ಜನ ಪೋಲಿಸರು (ಕೆಲವರು ಯೂನಿಫಾರ್ಮ್‌ನಲ್ಲಿದ್ದರು, ಇನ್ನು ಕೆಲವರದ್ದು ಸಾಮಾನ್ಯ ಉಡುಪು) ಬಂದು ನೆರೆಯವರೊಬ್ಬರು ನಾವೆಲ್ಲ ಹೆಂಗಸರು ಸೇರಿ ಇಲ್ಲಿ ಲೈಂಗಿಕ ಚಟುವಟಿಕೆ ನಡೆಸುತ್ತಿದ್ದೇವೆ ಎಂದು ದೂರಿದ್ದಾರೆಂದು ಹೇಳಿದರು. ತೇಜಸ್ವಿಯನ್ನು ಹೊಡೆದು, ನಮ್ಮನ್ನು ಕೀಳು ಭಾಷೆಯಲ್ಲಿ ಬಯ್ಯಲು ಶುರು ಮಾಡಿದರು. ಇದು ನಮ್ಮ ತಂದೆ-ತಾಯಿಯರ ಮನೆ, ಇಲ್ಲಿ ನಾವು ಚಿಕ್ಕದೊಂದು ಪಾರ್ಟಿ ನಡೆಸುತ್ತಿದ್ದೇವೆಂದು ಹೇಳಿದ ಮೇಲೆ ಸ್ವಲ್ಪ ಹೊತ್ತು ಸುಮ್ಮನಾದರು. ನಾವು ಹೆಂಗಸರಲ್ಲ, ಹಿಜ್ರಾಗಳು ಎಂದು ಗೊತ್ತಾದ ತಕ್ಷಣ, ಅವರ ವರ್ತನೆ ಪೂರ್ತಿ ಬದಲಾಯಿತು. ನಮ್ಮ ಬಾಯ್‌ಫ್ರೆಂಡ್‌ಗಳಿಗೆ ಈ ಕೆಳಗಿನ ಹುಚ್ಚು ಪ್ರಶ್ನೆಗಳನ್ನು ಕೇಳಲಾರಂಭಿಸಿದರು.

* "ನಿಮಗೆ ಹುಡುಗಿಯರು ಸಿಕ್ಕಲ್ಲವಾ? ಇಂಥವರ ಜೊತೆ ಯಾಕಿದ್ದೀರಿ?"

* "ಅವರ ಜೊತೆ ಹೇಗೆ ಕೂಡುತ್ತೀರಿ/ ಮಲಗುತ್ತೀರಿ?"

* "ನೀವೆಲ್ಲಾ ನಪುಂಸಕರಾ? ಚಕ್ಕಾಗಳಾ?" (ಹಿಜ್ರಾ ಎನ್ನುವುದಕ್ಕೆ ಕೀಳು ಮಟ್ಟದ ಸಂಬೋಧನೆ)

* "ಅವರಿಗೆ ನಿಜವಾದ ಮೊಲೆ ಮತ್ತು ಯೋನಿ ಇರುತ್ತದಾ?"

ಆಮೇಲೆ ಅವರು ನಮ್ಮ ಮೊಲೆಗಳನ್ನು ತೋರಿಸುವಂತೆ ಜೋರು ಮಾಡಿದರು. ಅವರಲ್ಲೊಬ್ಬ ನಮ್ಮ ಮೊಲೆಗಳನ್ನು ಮುಟ್ಟಿ ನೋಡಲು ಕೈ ಹಾಕಿಯೇ ಬಿಟ್ಟ. ನಮ್ಮನ್ನು ಅಲ್ಲಿಗೇ ಬಿಟ್ಟರು. ಆದರೆ ಲಾರೆನ್ಸ್, ತೇಜಸ್ವಿ ಮತ್ತು ಥಾಮಸ್‌ರನ್ನು ಹೊಯ್ಸಳ ವ್ಯಾನಿನಲ್ಲಿ ಪೋಲೀಸ್ ಸ್ಟೇಷನ್ನಿಗೆ ಕರೆದೊಯ್ದರು.

### 3.4 ಹಿಡಿಯಲು ಬಲೆ ಬೀಸುವ ಪೋಲೀಸರು

"ಸಮಾಜದ ನೈತಿಕತೆ"ಯನ್ನು ಎತ್ತಿ ಹಿಡಿಯುವ ಸೋಗಿನಲ್ಲಿ ಹಿಜ್ರಾ ಮತ್ತು ಕೋಥಿ ಲೈಂಗಿಕ ಕಾರ್ಮಿಕರನ್ನು ಬಲವಂತವಾಗಿ ಸಿಕ್ಕಿಹಾಕಿಸುವುದು ಪೋಲೀಸರು ಮಾಡುವ ಅತಿ ಕ್ರೂರವಾದ ಕೀಳು ಕೆಲಸ. ಇಲ್ಲಿ ದಾಖಲಾಗಿರುವ ಘಟನೆಗಳು ಹೇಗೆ ಪೋಲಿಸರು ಹಿಜ್ರಾಗಳು ಮತ್ತು ಅವರನ್ನು ಹುಡುಕಿಕೊಂಡು ಬರುವ ಗಿರಾಕಿಗಳನ್ನು ಸಿಕ್ಕಿಹಾಕಿಸುತ್ತಾರೆ ಎನ್ನುವುದಕ್ಕೆ ಸಾಕ್ಷಿಯಾಗಿವೆ. ಇವುಗಳಲ್ಲಿ ಮುಖ್ಯವಾಗಿ ಗಮನಿಸಬೇಕಾದ ಅಂಶವೆಂದರೆ, ಹಿಜ್ರಾಗಳು ಅಥವಾ ಅವರ ಗಿರಾಕಿಗಳನ್ನು ಲಂಚ ಕೊಟ್ಟ ತಕ್ಷಣ ಪೋಲಿಸರು ಬಿಟ್ಟುಬಿಡುತ್ತಾರೆ. ಹೀಗೆ ಇದೊಂದು ಪೋಲಿಸರನ್ನೊಳಗೊಂಡ ಲಾಭದಾಯಕ ಉದ್ದಿಮೆಯಾಗಿ ಪರಿವರ್ತನೆಯಾಗಿದೆ.

* **ಸುನೀತ,** ಇಪ್ಪತ್ತೊಂದು ವಯಸ್ಸಿನ ಹಿಜ್ರಾ ಹೇಳುವಂತೆ :

"ನಾನು ಆಫೀಸಿನಲ್ಲಿದ್ದಾಗ ಒಂದು ಫೋನ್ ಬಂತು. ಕರೆ ಮಾಡಿದವ ತಾನು ಗಿರಾಕಿಯೆಂದೂ, ಏಳೂವರೆಯ ಸುಮಾರಿಗೆ ಪಾರ್ಕಿನ ಎದುರಿಗೆ ಇರುತ್ತೇನೆಂದೂ ಹೇಳಿದ. ಅಲ್ಲಿಗೆ ಹೋದ ತಕ್ಷಣ ನನಗೆ ಎರಡು ಹೊಯ್ಸಳ ವ್ಯಾನ್‌ಗಳ ಮಧ್ಯೆ ಒಂದು ಕಾರ್

ನಿಂತಿರುವುದು ಕಾಣಿಸಿತು. ಅಲ್ಲಿದ್ದವರು ಸಾಮಾನ್ಯ ಉಡುಪಿನಲ್ಲಿದ್ದ ಪೋಲಿಸರು ಎಂಬುದು ನನಗೆ ತಿಳಿಯಿತು. ಆಟೋದವನಿಗೆ ಗಾಡಿ ನಿಲ್ಲಿಸಬೇಡವೆಂದೂ, ಬೇರೆಲ್ಲಿಯಾದರೂ ಕರೆದುಕೊಂಡು ಹೋಗೆಂದು ಹೇಳಿದೆ. ಹೊಯ್ಸಳ ವ್ಯಾನ್ ಮಾತ್ರಾ ನಮ್ಮನ್ನು ಸ್ವಲ್ಪ ದೂರದವರೆಗೆ ಹಿಂಬಾಲಿಸಿತು. ಆಮೇಲೆ ನಾವು ತಪ್ಪಿಸಿಕೊಂಡೆವು.

ಇನ್ನೊಮ್ಮೆ ಗಿರಾಕಿಯೊಬ್ಬ ನನ್ನನ್ನು ಕರೆದ. ಅವನು ಮೊದಲು ಏಳುನೂರು ರೂಪಾಯಿಗಳನ್ನು ಕೊಟ್ಟು ಉಳಿದ ಎಂಟುನೂರನ್ನು ನಂತರ ಕೊಡುತ್ತೇನೆಂದು ಹೇಳಿದ್ದ. ನಾವು ದಾರಿಯಲ್ಲಿ ಹೋಗುವಾಗ ಮಾರುತಿ ವ್ಯಾನೊಂದು ನಮ್ಮ ಪಕ್ಕ ಬಂತು. ಅದರಲ್ಲಿದ್ದವರು ಪೋಲಿಸರೆಂದು ತಿಳಿದ ನಾನು ಭಯಗೊಂಡೆ. ನಾನು ಹಿಂದೆ ಕೂತಿದ್ದ ಕೈನೆಟಿಕ್ ಹೋಂಡ ಫಾಸ್ಟಾಗಿ ಹೋಗುವಂತಿರಲಿಲ್ಲ. ಕೊನೆಗೂ ವ್ಯಾನ್ ನಮ್ಮ ಹತ್ತಿರವೇ ನಿಂತು ಬಿಟ್ಟಿತು. ಅದರೊಳಗಿಂದ ಒಬ್ಬ ನಮ್ಮ ಗುರುತು ಕೇಳಿದ. ನನ್ನ ಕಸ್ಟಮರ್ ಬಳಿ ಡ್ರೈವಿಂಗ್ ಲೈಸೆನ್ಸ್ ಇದೆಯಾ ಎಂದು ಕೇಳಿದ. ನಾನು ಅವರು ಯಾರೆಂದೂ, ಸರ್ಕಲ್ ಇನ್ಸ್‌ಪೆಕ್ಟರ್ ಆಗಿದ್ದಲ್ಲಿ ಅವರ ಗುರುತಿನ ಚೀಟಿ ನೋಡಬಹುದೇ ಎಂದು ಕೇಳಿದೆ.

ಅವನು ನನ್ನನ್ನು ವ್ಯಾನಿನೊಳಕ್ಕೆ ಬರುವಂತೆ ಹೇಳಿದೆ. ನಾನು ಪೋಲಿಸ್ ಠಾಣೆಗೆ ಬರಲು ಸಿದ್ಧವಿದ್ದೇನೆ, ಆದರೆ ವ್ಯಾನಿನಲ್ಲಿ ಅಲ್ಲ ಎಂದು ಹೇಳಿದ ನಂತರ ಅಲ್ಲಿಂದ ಹೋದ.

---

**ರೂಪ,** ಮೂವತ್ತೊಂದು ವಯಸ್ಸಿನ ಹಿಜ್ರಾ ಹೇಳುವಂತೆ :

"ಸಾಮಾನ್ಯವಾಗಿ ನಾನು ಏನೂ ಮಾಡದೆ ರಸ್ತೆಯಲ್ಲಿ ನಡೆಯುವಾಗ, ಅಥವಾ ಸುಮ್ಮನೆ ನಿಂತರೂ ಸಾಕು, ಗಂಡಸರು ಬಂದು ಮಾತಿಗೆ ತೊಡಗುತ್ತಿದ್ದರು. ಕೆಲವರು ಸ್ವಲ್ಪ ನಾಚಿಕೆ ಇತ್ಯಾದಿ ಇದ್ದವರು ಡ್ರಾಪ್ ಬೇಕಾ? ಎಂದರೆ, ಇನ್ನು ಕೆವರು ನೇರವಾಗಿ "ಎಷ್ಟು?" ಎಂದೇ ಕೇಳಿಬಿಡುತ್ತಿದ್ದರು. ಕೆಲ ಸಾರಿ ನಿಜವಾಗಿ ಬರೀ ಯಾವುದೋ ಜಾಗಕ್ಕೆ ಡ್ರಾಪ್ ಮಾಡಿ ಹೋದವರಿದ್ದಾರೆ. ಆಗೆಲ್ಲ ಒಂದೆರೆಡು ಘಂಟೆಗಳೇ ವೇಸ್ಟ್ ಆಗಿಬಿಟ್ಟಿವೆ. ಆ ದಿನ ಸಂಜೆ ಎಂಟಾಗಿತ್ತು. ಮಾಮೂಲಿಯಾಗಿ ಹೋಗುವ ರಸ್ತೆಯಲ್ಲಿ ನಾನು ಹೊರಟಿದ್ದೆ. ಇದ್ದಕ್ಕಿದ್ದಂತೆ ಐದು ಜನ ಗಂಡಸರು ಬಂದರು. ನನಗೆ ಹೆದರಿಕೆ ಆಗಿ ಓಡಿ ಹೋಗಲು ಪ್ರಯತ್ನ ಮಾಡಿದೆ. ನನ್ನ ಕೈಯ್ಯನ್ನು ಬಲವಾಗಿ, ಅದು ನೋಯುವ ವರೆಗೆ ಹಿಡಿದುಕೊಂಡರು. "ಇಲ್ಲೇನು ಮಾಡುತ್ತಿದ್ದೀ?" ಎಂದು ಒಬ್ಬ ಕೇಳಿದ. "ನಿನ್ನಂತಹ ಹೆಂಗಸರ ಬಗ್ಗೆ ನಮಗೆ ಸಾಕಷ್ಟು ದೂರುಗಳು ಬಂದಿವೆ, ನೀನು ಇಲ್ಲಿಂದ ಗಂಡಸರನ್ನು ಕರೆಕೊಂಡು ಹೋಗುತ್ತೀ ಎಂದು ಹೇಳಿದ್ದಾರೆ" ಎಂದು ಇನ್ನೊಬ್ಬ ಹೇಳಿದ. ಅವರು ಸಾಮಾನ್ಯ ಉಡುಪಿನಲ್ಲಿದ್ದ ಪೋಲಿಸರೇ. ನನಗೆ ಮೊದಲು ಅವರು ಗೂಂಡಾಗಳೇನೋ ಎಂದು ಅನುಮಾನವಾಗಿ, ನನ್ನನ್ನು ರೇಪ್ ಮಾಡಿಬಿಟ್ಟರೆ ಎಂದು ಭಯವಾಗಿತ್ತು. ಪೋಲಿಸರು ಹಾಗೆ ಮಾಡುವುದಿಲ್ಲವೆಂದಲ್ಲ, ಪೋಲೀಸ್ ಠಾಣೆಗಳಲ್ಲಿ ಬೇಕಾದಷ್ಟು ಹಿಜ್ರಾ ಮತ್ತು ಕೋಥಿಗಳನ್ನು ರೇಪ್ ಮಾಡಿದ್ದಾರೆ. ಕೆಲವೊಮ್ಮೆ ಅಂಥಾ ಕಥೆಗಳು ಕೇಳಲಾಗದಷ್ಟು ಭಯಾನಕವಾಗಿರುತ್ತವೆ. ಕಂಪ್ಲೇಂಟ್ ಕೂಡ ಮಾಡುವಂತಿರುವುದಿಲ್ಲ. "ನಾನು ಹಿಜ್ರಾ. ಹೊಟ್ಟೆ ತುಂಬಿಸಿಕೊಳ್ಳಲಿಕ್ಕೆ ರಸ್ತೆಗಿಳಿದಿದ್ದೇನೆ. ಪ್ಲೀಸ್

ನನ್ನನ್ನು ಬಿಟ್ಟುಬಿಡಿ" ಎಂದು ಗೋಗರೆದೆ. "ಇಲ್ಲೇ ಸ್ವಲ್ಪ ಹೊತ್ತು ಇರು, ಆಮೇಲೆ ನಿನ್ನ ಬಿಟ್ಟುಬಿಡುತ್ತೇವೆ" ಎಂದರು. ನನಗೋ ನನ್ನನ್ನು ಸುಳ್ಳು ಕೇಸಿನಲ್ಲಿ ಸಿಕ್ಕಿಹಾಕಿಸಿಬಿಟ್ಟರೆ ಎಂಬ ಭಯ, ನಾನು ಮತ್ತೆ ಅವರಲ್ಲಿ ಗೋಗರೆದೆ, ಕೆಲ ಹನಿ ಕಣ್ಣೀರು ಕೂಡ ಹಾಕಿದೆ, ನನ್ನನ್ನು ಯಾಕೆ ಇಲ್ಲಿ ಇರಿಸಿಕೊಳ್ಳುತ್ತೀರಿ ದಯವಿಟ್ಟು ಹೇಳಿ ಎಂತಲೂ ಕೇಳಿದೆ.

ಅವರಲ್ಲೊಬ್ಬ ನನ್ನನ್ನು ಗಾಳವಾಗಿ ಉಪಯೋಗಿಸಿಕೊಂಡು ಇಲ್ಲಿಗೆ ಬರುವ ನನ್ನ ಗಿರಾಕಿಗಳನ್ನು ಹಿಡಿಯುವುದಾಗಿಯೂ, ನಾನು ಸಹಕರಿಸಿದರೆ ನನ್ನನ್ನು ಆಮೇಲೆ ಸುಮ್ಮನೆ ಬಿಟ್ಟುಬಿಡುವುದಾಗಿಯೂ ತಿಳಿಸಿದ.

ನನಗೆ "ನಾರ್ಮಲ್" ಆಗಿ ನಡೆದುಕೋ ಎಂದು ಹೇಳಿ, ಅವರು ನನ್ನಿಂದ ಸ್ವಲ್ಪ ದೂರದಲ್ಲಿ ನಿಂತರು. ನಾನು ಓಡಿ ಹೋಗಲೇ ಎಂದುಕೊಳ್ಳುತ್ತಾ ಸುತ್ತ ನೋಡಿದೆ. ಹಾಗೆ ಮಾಡಿದರೆ ಮೂರ್ಖತನವಾದೀತು ಎಂದು ಸುಮ್ಮನೆ ಕಾಯುತ್ತಾ ನಿಂತೆ. ಲೈಂಗಿಕ ಕಾರ್ಮಿಕಳೆಂಬುದು ಜನಕ್ಕೆ ಗೊತ್ತಾಗದಿರಲು ಹೇಗೆ ನಿಂತರೆ ಸೂಕ್ತ ಎಂದು ಯೋಚಿಸತೊಡಗಿದೆ. ಹಾಗೆ ಮಾಡುವಷ್ಟು ಪ್ರತಿಭಾವಂತೆ ನಾನಲ್ಲ, ಅಥವಾ ಅಂಥಾ ಒಂದು "ರೀತಿ" ಇಲ್ಲ ಎಂಬುದು ಸ್ವಲ್ಪ ಹೊತ್ತಿನಲ್ಲೇ ಹೊಳೆಯಿತು. ನನ್ನ ಹತ್ತಿರ ಯಾರೂ ನಿಲ್ಲದಿರಲಿ ಎಂದು ಮನದಲ್ಲೇ ಗಟ್ಟಿಯಾಗಿ ಪ್ರಾರ್ಥಿಸತೊಡಗಿದೆ.

ಒಂದು ಕಾರು ಹತ್ತಿರ ಬಂತು, ಕಿಟಕಿಯ ಗಾಜು ಕೆಳಗಿಳಿಯಿತು. ಅದರೊಳಗಿಂದ ಒಂದು ಮುಖ ಹಣುಕುತ್ತಿದ್ದುದು ನನಗೆ ಕಂಡರೂ, ನಾನು ಆ ಕಡೆ ನೋಡಬಾರದೆಂದುಕೊಂಡೆ. ತತ್‌ಕ್ಷಣವೇ ಐದು ಜನ ಪೋಲಿಸರು ಕಾರನ್ನು ಸುತ್ತುವರೆದರು. ಒಬ್ಬ ಕಾರ್ ಕೀಯನ್ನು ಕಿತ್ತರೆ, ಇನ್ನೊಬ್ಬ ಡ್ರೈವರನ ತೋಳು ಹಿಡಿದು ಹೊರಗೆಳೆದ. ಅವನನ್ನು ಅಲ್ಲಿಂದ ಎಳೆದುಕೊಂಡು ಹೋಗುವಾಗ ಅವನು ಪೋಲಿಸರನ್ನು ಯಾರೆಂದು ಪದೇ ಪದೇ ಪ್ರಶ್ನಿಸುತ್ತಿದ್ದುದು ಕೇಳಿತು. ಅವರ್ಯಾರೂ ಉತ್ತರಿಸಿದ್ದಂತೆ ಕಾಣಿಸಲಿಲ್ಲ. ಇನ್ನೊಬ್ಬ ಪೋಲಿಸರವನು ಕಾರನ್ನು ಹತ್ತಿರದಲ್ಲಿದ್ದ ಪಾರ್ಕಿಂಗ್ ಜಾಗದಲ್ಲಿ ನಿಲ್ಲಿಸಿದ. ನಾನು ಮಾತ್ರ ನಿಂತಲ್ಲೇ ನಿಂತಿದ್ದೆ.

ನಂತರದ ಬಲಿಪಶು ಒಬ್ಬ ಬೈಕ್ ಸವಾರ. ನನ್ನ ಹತ್ತಿರ ನಿಲ್ಲಿಸಿ ಡ್ರಾಪ್ ಬೇಕಾ? ಎಂದು ಕೇಳಿದ. ದುರುಗುಟ್ಟಿ ನೋಡುತ್ತಾ ಸಿಟ್ಟಿನಲ್ಲಿ "ಬೇಡ, ಬೇಡ" ಎಂದು ನಾನು ಹೇಳಿದೆ. ಅಷ್ಟರಲ್ಲೇ ಪೋಲಿಸರು ಎಗರಿಬಿದ್ದು ಅವನನ್ನೂ ಎಳೆದೊಯ್ದರು. ತಾನೇನು ತಪ್ಪು ಮಾಡಿದ್ದೇನೆ ಅನ್ನುವ ಅವನ ಪ್ರಶ್ನೆಗೆ ಅವರು ಉತ್ತರಿಸಲಿಲ್ಲ. ಅವನ ಮೇಲೆ ಸ್ವಲ್ಪ ಬಲಪ್ರಯೋಗ ಮಾಡಬೇಕಾಗಿ ಬಂತು... "ಸ್ಟೇಷನ್ನಿಗೆ ಬಾ, ಅಲ್ಲಿ ಹೇಳ್ತೀವಿ" ಎಂದರು. ಹಿಂದಿನವನ ಕಾರ್ ಪಕ್ಕದಲ್ಲೇ ಈ ಬೈಕ್ ಕೂಡ ನಿಲ್ಲಿಸಿದರು.

ನಾನೇನಾದರು ಸಿಗ್ನಲ್ ಮಾಡಲಿಕ್ಕೆ ಪ್ರಯತ್ನಿಸಿದರೆ ಬಂಧಿಸುವುದಾಗಿ ಪೋಲಿಸರಲ್ಲೊಬ್ಬ ಬೆದರಿಸಿದ. ಹತ್ತಿರ ಬಂದವರ ಜೊತೆ ಚೆನ್ನಾಗಿ ಮಾತನಾಡುವಂತೆ ಹೇಳಿದ. ನಾನು ಸುಮ್ಮನೆ ಇವರ ಮಾತುಗಳನ್ನು ಪಾಲಿಸಿದರೆ ಒಳ್ಳೆಯದು ಎಂದುಕೊಂಡೆ. ಹತ್ತು ಗಂಡಸರನ್ನು ಬಲೆಗೆ ಹಾಕಿದ ನಂತರ ನನ್ನನ್ನು ಬಿಟ್ಟುಬಿಡುವುದಾಗಿ ತಿಳಿಸಿದ್ದರು

ಆದರೆ ಹತ್ತು ಗಂಡಸರನ್ನು ಕೇವಲ ಒಂದು ಘಂಟೆಯಲ್ಲೇ ಹಿಡಿದದ್ದು ನೋಡಿ ನನಗೆ ಸಿಟ್ಟು, ಆಶ್ಚರ್ಯ ಎರಡೂ ಒಟ್ಟಿಗೆ ಆದವು. ಕೆಲವೊಮ್ಮೆ ಒಬ್ಬ ಗಿರಾಕಿ ಸಿಗಲಿಕ್ಕೆ ನಾನು ಸುಮಾರು ಘಂಟೆಗಳ ಕಾಲ ಬಸವಳಿದು ಕಾದಿದ್ದೇನೆ. ಇಲ್ಲಿ ನೋಡಿದರೆ ಹತ್ತು ಗಂಡಸರು, ಬರೀ ಒಂದು ಘಂಟೆಯಲ್ಲಿ! ಕಾಸು ಗಿಟ್ಟಲಿಲ್ಲ. ಇದಲ್ಲದರ ನಡುವೆಯೂ ನನಗೆ ತೀರಾ ಹೆದರಿಕೆ ಆಗಿತ್ತು.

ಅವರಲ್ಲಿ ಹೋಗಿ ಹತ್ತು ಜನ ಗಂಡಸರು ಸಿಕ್ಕರಲ್ಲ. ನನ್ನನ್ನು ಹೋಗಲು ಬಿಡಿ ಎಂದು ಬೇಡಿಕೊಂಡೆ. ಇನ್ನೂ ಐದು ಜನ ಸಿಗುವವರೆಗೆ ಇಲ್ಲೇ ಇರು ಎಂದರು. ಅವರ ಇನ್ಸ್‌ಪೆಕ್ಟರ್ ಇಷ್ಟರಲ್ಲೇ "ರೌಂಡ್ಸ್" ಮೇಲೆ ಬರುವುದಾಗಿ ಅವರು ಮಾತನಾಡಿಕೊಳ್ಳುತ್ತಿದ್ದುದು ನನಗೆ ಕೇಳಸಿತು. ಹೀಗಿರುವಾಗ ನನ್ನನ್ನು ಇನ್ನೂ ಸ್ವಲ್ಪ ಹೊತ್ತು ಹೋಗಲು ಬಿಡಲಾರರು ಎಂಬುದು ನನಗೆ ಅರಿವಾಯಿತು. ನಿಲ್ಲದ ಹೊರತು ಬೇರೆ ದಾರಿ ಇರಲಿಲ್ಲವಾದ್ದರಿಂದ ಸುಮ್ಮನಾದೆ. ಮತ್ತು ನಾಲ್ಕು ಗಂಡಸರನ್ನು ಎಳೆದೊಯ್ದರು. ಒಬ್ಬ ಸುಮ್ಮನೆ ಬಂದು ನನ್ನ ಪಕ್ಕ ನಿಂತಿದ್ದನಷ್ಟೆ.

ಸ್ವಲ್ಪ ಹೊತ್ತಿನಲ್ಲೇ ವ್ಯಾನ್ ಬಂತು. ಎಲ್ಲರನ್ನೂ ಅದರಲ್ಲಿ ತುಂಬಿಸಿಕೊಂಡು ಹೋದರು. ಅವರೆಲ್ಲ ಹಣ ಕೊಟ್ಟ ನಂತರ ಬಿಟ್ಟಿರಬಹುದು. ಅವರನ್ನು ಅರೆಸ್ಟ್ ಮಾಡಲು ಕಾನೂನಿನ ಪ್ರಕಾರ ಯಾವ ಅವಕಾಶವೂ ಇಲ್ಲ. ಗಿರಾಕಿಗಳನ್ನು ಸೆಳೆದಿದ್ದಕ್ಕೆ, ಆಹ್ವಾನಿಸಿದ್ದಕ್ಕೆ ನನ್ನನ್ನು ಅರೆಸ್ಟ್ ಮಾಡಬಹುದಿತ್ತು. ಆದರೆ ಹಾಗೆ ಮಾಡಲಿಲ್ಲ. ಇನ್ನೊಮ್ಮೆ ಇಲ್ಲಿ ಕಾಣಿಸಿದರೆ ಹುಶಾರ್, ಎನ್ನುವ ಸಾಧಾರಣ ಬೆದರಿಕೆ ಹಾಕಿ ನನ್ನನ್ನು ಬಿಟ್ಟಿದ್ದರು.

ನನಗೆ ನಿರಾಳವಾದರೂ ಇನ್ನು ಮೇಲೆ ಇಲ್ಲಿ ಕೆಲಸ ಮಾಡುವಂತಿಲ್ಲ ಎನ್ನುವುದು ಮನದಟ್ಟಯಿತು. ಪೋಲಿಸರಲ್ಲದಿದ್ದರೂ ಆ ಹದಿನಾಲ್ಕು ಗಂಡಸರು ನನ್ನ ಮೇಲೆ ಸೇಡು ತೀರಿಸಿಕೊಳ್ಳಬಹುದು ಎಂಬ ಅಂಶ ಮನಸ್ಸಿಗೆ ಬಂತು. ನನ್ನ ನಸೀಬು ಗಟ್ಟಿ ಇದ್ದರೆ ಅವರು ಕಂಡಾಗ ಬರೀ ಕಪಾಳಕ್ಕೆ ಹೊಡೆದು ಸುಮ್ಮನಾಗಬಹುದೇನೋ. ಆದರೆ ಸುಲಭವಾಗಿ ಸಿಗುವ ಆಸಿಡ್ ಬಲ್ಬುಗಳ ಚಿತ್ರ ಭೀತಿ ಉಂಟುಮಾಡಿತು.

### 3.5 ಪೋಲಿಸ್ ಠಾಣೆಗಳಲ್ಲಿ ನೀಡುವ ಕಿರುಕುಳ :

ಪೋಲಿಸ್ ಠಾಣೆಗಳು ಬಹುಕಾಲದಿಂದ ಹಿಂಸೆ, ಕಿರುಕುಳಕ್ಕೆ ಇಂಬು ಕೊಡುವ, ವ್ಯವಸ್ಥಿತವಾದ "ಕಸ್ಟೋಡಿಯಲ್" ಸಂಸ್ಥೆಗಳಾಗಿವೆ. "ಐಟಿಪಿಏ" ಮತ್ತು ಸೆಕ್ಷನ್ 377ರಂತಹ ಸರ್ವಾಧಿಕಾರ ನೀಡುವ ಕಾಯ್ದೆಗಳು, ಸಾರ್ವಜನಿಕ ಸ್ಥಳದಲ್ಲಿ ಹೆಚ್ಚಿಗೆ ಕಾಣದಿದ್ದರೂ, ಠಾಣೆಗಳಂತಹ ಅನುಕೂಲಕರ ವಾತಾವರಣದಲ್ಲಿ ಹತ್ತು ಹಲವಾರು ಹಿಂಸಾತ್ಮಕ ರೂಪ ಪಡೆಯುತ್ತವೆ.

ಅಲ್ಲಿ ಪೋಲಿಸರ ವರ್ತನೆ ಹದ್ದು ಮೀರದಂತೆ ನೋಡಿಕೊಳ್ಳಲು ಕಾನೂನಿನ ಪ್ರಕಾರ ಸಾಕಷ್ಟು ವ್ಯವಸ್ಥೆ ಮಾಡಲಾಗಿದ್ದರೂ, ಠಾಣೆಗಳಲ್ಲಿ ಅವುಗಳನ್ನೆಲ್ಲಾ ಗಾಳಿಗೆ ತೂರಲಾಗುತ್ತದೆ. ಇಂಥ ಪೋಲಿಸರು ನಾಗರಿಕವಾಗಿ ನಡೆದುಕೊಳ್ಳುವುದು ವಿರಳ. ಕೆಳಗಿನ ಹೇಳಿಕೆಗಳನ್ನು ಗಮನಿಸಿ :

**ನಾಸಿರ್,** ಇಪ್ಪತ್ತೇಳು ವರ್ಷದ ಕೋಥಿ ಹೇಳುವಂತೆ :

"ಸಂಪಂಗಿರಾಮನಗರ ಪೋಲಿಸ್ ಸ್ಟೇಷನ್ನಿನಲ್ಲಿ ನನ್ನನ್ನು ಸಲೀಂ, ನನ್ನ ತಂದೆಯನ್ನು ಅಬ್ದುಲ್ ಎಂಬ ತಪ್ಪು ಹೆಸರಿನಲ್ಲಿ, ಸುಳ್ಳು ದುರು ದಾಖಲಿಸಿಕೊಂಡು ಅರೆಸ್ಟ್ ಮಾಡಿ ನನ್ನನ್ನು ಲಾಕಪ್ಪಿನಲ್ಲಿಟ್ಟರು. ಈ ಬಂಧನವನ್ನು ನಾನು ವಿರೋಧಿಸಿದಾಗ, ನಿನ್ನ ಜೊತೆ ನಾವೇನೂ ಮಾಡಲಾರೆವು, ಆದ್ದರಿಂದ ಸುಮ್ಮನೆ ಇರು ಎಂದು ಹೇಳಿದರು. ರಾತ್ರಿ ಹನ್ನೊಂದರವರೆಗೆ ಅಲ್ಲೇ ಇದ್ದೆ. ಒಂದು ಗಂಟೆಯ ನಂತರ ಮೂರು ಜನ ಪೋಲಿಸರು ಬಂದು ನನಗೆ ಶಿಶ್ನ ಇದೆಯೋ ಇಲ್ಲವೋ ಎಂದು ಕೇಳಿದರು. "ತೆಗಿ, ನೋಡೋಣ" ಎಂದು ನಿಂತರು. ಅವರ ಮಾತನ್ನು ಕೇಳಲಿಲ್ಲವಾದ್ದರಿಂದ ನಾನು ಬಟ್ಟೆ ಬಿಚ್ಚಲಿ ಎಂದು ಬಲವಾಗಿ ಹೊಡೆಯಲು ಶುರು ಮಾಡಿದರು. ಒಬ್ಬ ಪೋಲಿಸರವನು ನನ್ನ ಗುದದ್ವಾರದೊಳಕ್ಕೆ ಲಾಠಿ ತೂರಿಸಿ "ಖೋಜ" (ಹಿಜ್ರಾ/ ಕೋಥಿಗಳ ಬಗ್ಗೆ ಬಳಸಲಾಗುವ ಕೀಳು ಪದ) ಎನ್ನಹತ್ತಿದ. ಇನ್ನೊಬ್ಬ ಬಲವಂತವಾಗಿ ತನ್ನ ಶಿಶ್ನವನ್ನು ನನ್ನ ಬಾಯೊಳಕ್ಕೆ ತೂರಿಸಿದರೆ, ಇನ್ನೊಬ್ಬ ನನ್ನ ಗುದದ್ವಾರದೊಳಕ್ಕೆ ನುಗ್ಗಿಸಿದ. ಒಬ್ಬರಾದ ಮೇಲೆ ಒಬ್ಬರು ತಮಗೆ "ಸಮಾಧಾನ" ವಾಗುವವರೆಗೂ ಅದನ್ನೇ ಮಾಡಿದರು. ಅಷ್ಟು ಹೊತ್ತಿಗೆ ಬೆಳಗ್ಗೆ ಐದು ಘಂಟೆಯಾಗಿತ್ತು. ನಾನು ನನ್ನ ಸಹೋದರ ಮನೆಯಲ್ಲಿ ನನ್ನ ಕಾಯುತ್ತಾ ಚಿಂತಿಸುತ್ತಿರುತ್ತಾನೆ ಎಂದು ಹೇಳಿದೆ. ಆಗ "ನಿನ್ನನ್ನು ಹಿಡಿದು ತಂದ ಪೋಲಿಸ್ ಪೇದೆ ಮತ್ತು ಇನ್ಸ್‌ಪೆಕ್ಟರ್ ವಾಪಾಸ್ ಬರಲಿ, ನಂತರ ನಿನ್ನನ್ನು ಬಿಡುತ್ತೇವೆ" ಎಂದರು. ಬೆಳಗ್ಗೆ ಸುಮಾರು ಒಂಭತ್ತು ಘಂಟೆಗೆ ನನ್ನ ಕೈಬೆರಳು ಮತ್ತು ಕಾಲ್ಬೆರಳುಗಳ ಗುರುತನ್ನು ತೆಗೆದುಕೊಂಡರು. ಹೀಗೇಕೆಂದು ನಾನು ಕೇಳಿದರೆ "ನಾವು ಹೇಳಿದಷ್ಟು ಮಾಡು, ಎಂದು ಜೋರು ಮಾಡಿ ಮಧ್ಯಾಹ್ನ ಒಂದೂವರೆಯ ಸುಮಾರಿಗೆ ಬೆಂಗಳೂರು ನಗರ ಪೋಲಿಸ್ ಕಮೀಷನರ್ ಆಫೀಸಿಗೆ ಕರೆದೊಯ್ದು ಕೆಲ ಕಾಗದಗಳ ಮೇಲೆ ಸಹಿ ಮಾಡಲು ಹೇಳಿದರು. ನಾನು ಮಾಡಿದೆ. ಅಲ್ಲಿಂದ ಮ್ಯಾಜಿಸ್ಟ್ರೇಟರ ಮನೆಗೆ ಕರೆದುಕೊಂಡು ಹೋದರು. ಆಗ ಎರಡು ಘಂಟೆ. ಅವರು ಯಾವುದೋ ಮದುವೆಗೆ ಹೋಗಿದ್ದರಿಂದ ನಾವು ಸುಮಾರು ಅರ್ಧ ಘಂಟೆಯ ಕಾಲ ಕಾಯಬೇಕಾಯಿತು. ಮ್ಯಾಜಿಸ್ಟ್ರೇಟರು ಬಂದ ಕೂಡಲೇ ನನ್ನದೇನೂ ತಪ್ಪಿಲ್ಲ, ನಾನು ಮುಗ್ಧೆ ಎಂದು ಹೇಳಿದರೂ ಅವರು ನನ್ನ ಮಾತು ಕೇಳಲೇ ಇಲ್ಲ. ಸುಮ್ಮನೆ ಇಲ್ಲಿಂದ ಹೋಗು ಎಂದು ಹೇಳಿದರು.

ಅಲ್ಲಿಂದ ಕೇಂದ್ರ ಕಾರಾಗೃಹಕ್ಕೆ ನನ್ನನ್ನು ಕರೆದುಕೊಂಡು ಹೋಗಿ, ನನ್ನ ಸಾಮಾನನ್ನೆಲ್ಲ ಚೆಕ್ ಮಾಡಿ ನನ್ನ ಮನೆಯ ಬೀಗದ ಕೈ, ಬೆಲ್ಟು ಮತ್ತು ಸ್ಟೇಷನ್ನಿನಲ್ಲಿ ಕೀಳದೆ ಉಳಿದಿದ್ದ ಪುಡಿಗಾಸನ್ನೂ ಬಿಡದೆ ತೆಗೆದುಕೊಂಡರು.

---

**ಗೌತಮ,** ಅಂಗವಿಕಲ ಕೋಥಿ ಹೇಳುವಂತೆ :

ನನ್ನನ್ನು ಸಾರ್ವಜನಿಕ ಸ್ಥಳವೊಂದರಲ್ಲಿ ಹೊಡೆದು ಸ್ಟೇಶನ್ನಿಗೆ ಕರೆತಂದ ಮೇಲೆ ಅಲ್ಲಿಯೂ ಹೊಡೆದರು. (ಗೌತಮನ ಹೇಳಿಕೆ – "ಸಾರ್ವಜನಿಕ ಸ್ಥಳಗಳಲ್ಲಿ ಪೋಲಿಸರಿಂದ ಕಿರುಕುಳ" ನೋಡಿ) ಪೋಲಿಸರಿಗೆ ನಾನು ನನ್ನ ಜನರನ್ನು ಕರೆಯಬೇಕಿದೆ ಎಂದು ಹೇಳಿದೆ. ಇನ್ಸ್‌ಪೆಕ್ಟರ್

ಬಂದು ಮಾತಾಡಿ ವಿವರಗಳನ್ನು ಕೇಳಿದರು. ನಾನು ನನ್ನ ವಿಳಾಸ ಮತ್ತು "ಸಂಗಮ"ದ ಫೋನ್ ನಂಬರ್ ಕೊಟ್ಟೆ. ಅವರು ಫೋನ್ ಮಾಡಲು ಪ್ರಯತ್ನಿಸಿದರೂ ಸಾಧ್ಯವಾಗಲಿಲ್ಲ. ತಮ್ಮ ಪೇದೆಗಳಿಗೆ ಇನ್ನೊಮ್ಮೆ ಹಿಜ್ರಾಗಳು ಮತ್ತು ಅಂಗವಿಕಲರನ್ನು ವೇಶ್ಯಾವಾಟಿಕೆ ಅಥವಾ ಅಸಭ್ಯ ವರ್ತನೆ ಮಾಡದ ಹೊರತು ಸುಮ್ಮನೆ ಸ್ಟೇಷನ್ನಿಗೆ ಕರೆತರಬಾರದೆಂದು ಎಚ್ಚರಿಕೆ ನೀಡಿ, ನನ್ನನ್ನು ರಿಕ್ಷಾದಲ್ಲಿ ಹತ್ತಿಸುವಂತೆ ಹೇಳಿದರು. ಪೇದೆಗಳು ಅವರು ಹೇಳಿದಂತೆ ನನ್ನನ್ನು ರಿಕ್ಷಾದಲ್ಲಿ ಕೂರಿಸಿದರು.

---

**ಐಶ್ವರ್ಯ**, ಇಪ್ಪತ್ಮೂರು ವಯಸ್ಸಿನ ಹಿಜ್ರಾ ಹೇಳುವಂತೆ :

"ಠಾಣೆಯಲ್ಲಿ ನನ್ನನ್ನು ಬೆತ್ತಲೆಗೊಳಿಸಿ, ಒಬ್ಬರಾದ ಮೇಲೆ ಒಬ್ಬರಂತೆ ಪೋಲಿಸರು ನನ್ನನ್ನು ಹೊಡೆಯುವುದು, ಮೈಯೆಲ್ಲಾ ಮುಟ್ಟುವುದು ಮಾಡಿದರು. ನನ್ನ ಮುಂದೆ ಕೂತು ತಿಂದರೂ, ನನಗೆ ಚೂರೂ ಕೂಳು ಕೊಡಲಿಲ್ಲ. ನನ್ನನ್ನು ಬೆಂಗಳೂರು ನಗರ ಪೋಲಿಸ್ ಕಮೀಷನರ್‌ರ ಕಛೇರಿಗೆ ಕರೆದುಕೊಂಡು ಹೋಗಿ, ನನ್ನನ್ನು ಮೇಕಪ್ ಮಾಡಿಕೊಳ್ಳುವಂತೆ ಹೇಳಿ ವಿಡಿಯೋ ಚಿತ್ರಣ ಮಾಡಿಕೊಂಡರು. ಆಮೇಲೆ ನನ್ನನ್ನು ವಿಗ್ ಧರಿಸಿ ಡಾನ್ಸ್ ಮಾಡುವಂತೆ ಹೇಳಿದರು. ನಾನು ಮಾಡಿದೆ. ಕೊನೆಗೆ ನನ್ನ ಕಳ್ಳ ಎಂದು ಅರ್ಥೈಸಿಕೊಳ್ಳುವ ರೀತಿಯಲ್ಲಿ ಫೋಟೋ ಹೊಡೆದುಕೊಂಡರು.

---

**ಗೀತಾಂಜಲಿ**, ಇಪ್ಪತ್ಮೂರು ವಯಸ್ಸಿನ ಹಿಜ್ರಾ ಹೇಳುವಂತೆ :

"ನಾನೇನು ಹೇಳಲು ಪ್ರಯತ್ನಿಸಿದರೂ ಕೇಳದೆ ನನ್ನನ್ನು ಕಬ್ಬನ್ ಪಾರ್ಕ್ ಪೋಲಿಸ್ ಠಾಣೆಗೆ ಕರೆದುಕೊಂಡು ಹೋಗಿ ಸುಮ್ಮನೆ ಅಮಾನವೀಯವಾಗಿ ಹೊಡೆದರು. ಯಾರಿಗೂ ನನ್ನ ವಿಷಯ ಕೇಳುವ ಮನುಷ್ಯತ್ವ ಇರಲಿಲ್ಲ. ಎಂಟು ಜನ ಪೋಲಿಸರು ನನ್ನನ್ನು ಹೊಡೆದು ಲಾಕಪ್ಪಿಗೆ ತಳ್ಳಿದರು. ನನಗೆ ಶಿಶ್ನ ಇದೆಯೋ ಇಲ್ಲವೋ ಎಂಬ ಕುತೂಹಲ ಇದ್ದುದರಿಂದ ನನ್ನನ್ನು ಬೆತ್ತಲೆಗೊಳಿಸಿದರು. ಆಮೇಲೆ ತಲೆಕೆಳಗಾಗಿ ನೇತು ಬಿಟ್ಟು ಬಾಸುಂಡೆ ಏಳುವಂತೆ ಹೊಡೆದರು."

---

**ರೂಪ**, ಮೂವತ್ತು ವಯಸ್ಸಿನ ಹಿಜ್ರಾ: "ಕಳೆದ ಐದು ವರ್ಷಗಳಿಂದ ನಾನು ಬೆಂಗಳೂರಿನ ಹಮಾಮ್ (ಹಿಜ್ರಾಗಳು ನಡೆಸುವ ಸ್ನಾನದ ಮನೆ) ಒಂದರಲ್ಲಿ ಇದ್ದೇನೆ. ನಾನು ಲೈಂಗಿಕ ಕಾರ್ಮಿಕಳೂ ಹೌದು. ತಿಂಗಳಲ್ಲಿ ಆರೇಳು ಬಾರಿ ಪೋಲಿಸರು ನನ್ನನ್ನು ಐವತ್ತು ನೂರು ರೂಪಾಯಿಗಳಿಗೆ ಪೀಡಿಸುತ್ತಿದ್ದರು. ನನ್ನನ್ನು ಕಂಪ್ಲೇಂಟ್ ದಾಖಲು ಮಾಡದೆ ಸುಮಾರು ಬಾರಿ ಸ್ಟೇಷನ್ನಿನಲ್ಲಿ ಉಳಿಸಿಕೊಂಡು, ದೈಹಿಕ ಮತ್ತು ಲೈಂಗಿಕ ಕಿರುಕುಳ ನೀಡಿದ್ದಾರೆ. ಕೆಲ ಬಾರಿ ಚೆನ್ನಾಗಿ ಹೊಡೆದು ನನ್ನ ಬಟ್ಟೆ ಬಿಚ್ಚಿಸಿ, ಗುಪ್ತಾಂಗಗಳನ್ನು ನೋಡಿ ಕೀಳು ರೀತಿಯಲ್ಲಿ ತಮಾಷೆ ಮಾಡಿಕೊಂಡು ನಕ್ಕಿದ್ದಾರೆ. ಸ್ಟೇಷನ್ ಒಳಗೆ ಬರುವ ಪೋಲಿಸರೇ ಇರಲಿ, ಹೊರಗೆ ಹೊರಡುತ್ತಿರುವ ಪೋಲಿಸರೇ ಆಗಲಿ ನಮ್ಮನ್ನು ಕಾಲಿನಿಂದ ಒದೆಯದೆ ಮುಂದಕ್ಕೆ ಹೋಗಿಲ್ಲ.

ಒಮ್ಮೆ ನನ್ನನ್ನು ಸುಳ್ಳು ಕೇಸಿನಲ್ಲಿ ಅರೆಸ್ಟ್ ಮಾಡಿ ನನ್ನಿಂದ ಇಡೀ ಸ್ಟೇಷನ್ನನ್ನು ಶುಚಿಮಾಡಿಸಿದ್ದಾರೆ. ಆಗ ಚಳಿಗಾಲವಾಗಿದ್ದರೂ, ಹೊದೆಯಲು ಒಂದು ತುಂಡು ಬಟ್ಟೆಯನ್ನೂ ಕೊಡದೆ ಹಿಂಸೆ ಮಾಡಿದ್ದಾರೆ. ತಿನ್ನಲು ಏನನ್ನೋ ಒಂದು ಪೇಪರಿನ ಮೇಲೆ ಕೊಟ್ಟರು, ಅದು ನೆಲದ ಮೇಲೆಲ್ಲ ಸೋರಿ ಹೋಗುತ್ತಿತ್ತು. ಅದನ್ನು ಕೊಳೆಗಟ್ಟಿದ ನೆಲದ ಮೇಲಿಂದ ನೆಕ್ಕಿ ತಿನ್ನುವಂತೆ ಹೇಳಿದರು. ನಂತರ ನನ್ನನ್ನು ಕೋರ್ಟಿನಲ್ಲಿ ಹಾಜರುಪಡಿಸುವುದಾಗಿಯೂ, ನಾನೇನಾದರೂ ಅಲ್ಲಿ ಬಾಯಿ ಬಿಟ್ಟರೆ ಹುಶಾರ್ ಎಂದು ಎಚ್ಚರಿಕೆ ಕೊಟ್ಟರು. ಅಲ್ಲಿಗೆ ಕರೆದೊಯ್ಯುವ ಮೊದಲೆ ನನ್ನಿಂದ ಇನ್ನೂರು ರೂಪಾಯಿಗಳನ್ನು ಕಸಿದುಕೊಂಡು ಹೋಗಲು ಬಿಟ್ಟರು.

### *3.6 ಜೈಲುಗಳಲ್ಲಿ ಅತ್ಯಾಚಾರ:*

ಜೈಲುಗಳಂಥಾ ಕಸ್ಟೋಡಿಯಲ್ ಸಂಸ್ಥೆಗಳಲ್ಲಿ ಗಂಡಸರು ಹೆಂಗಸಿನ ರೀತಿ ವರ್ತಿಸುವುದರ ಪರಿಣಾಮ ಅಪಾಯಕಾರಿಯಾಗಿರುತ್ತದೆ. ಇದರಿಂದ ಜೈಲಿನ ಅಧಿಕಾರಿಗಳು ಮತ್ತು ಜೈಲುವಾಸಿಗಳೂ ಅಂಥವರನ್ನು ಕೆಟ್ಟದಾಗಿ ನಡೆಸಿಕೊಳ್ಳುವ ಸಂಭವ ಜಾಸ್ತಿ ಇರುತ್ತದೆ. ಅಲ್ಲಿ ಗಂಡಸರಿಗೆ ಮೀಸಲಾದ ಜಾಗ "ಗಂಡಸುತನ"ದಿಂದ ತುಂಬಿರುತ್ತದೇ ಹೊರತು ಬೇರಾವುದೇ ಲಿಂಗಕ್ಕೆ ಇಲ್ಲಿ ಅವಕಾಶ ಇಲ್ಲ. ಅಲ್ಲಿ ವಿಜೃಂಭಿಸುವ "ಗಂಡಸುತನ"ವನ್ನು ಹೋಲದ, ಹೆಂಗಸಿನ ನಡುವಳಿಕೆಗೆ ಹತ್ತಿರ ಬರುವ ವರ್ತನೆಗೆ ಜಾಗ ಇಲ್ಲ.

ಹೀಗಾಗಿ ಕೆಳಗಿನ ಹೇಳಿಕೆ ಅರ್ಥೈಸುವಂತೆ ಜೈಲು ಸೇರಿದ ಹಿಜ್ರಾ ಅಥವಾ ಕೋಥಿಗಳು ಅಮಾನುಷವಾದ ಲೈಂಗಿಕ ಹಲ್ಲೆಗೆ ಬಲಿಯಾಗುತ್ತಾರೆ.

**ನಾಸಿರ್**, ಇಪ್ಪತ್ತೇಳು ವರ್ಷದ ಕೋಥಿ ಹೇಳುವಂತೆ: "ಒಂದು ಸ್ಟೇಷನ್ನಿನಲ್ಲಿ ಬಹುಪಾಲು ಹಣವನ್ನು ದೋಚಿದ ಪೋಲಿಸರು ನನ್ನನ್ನು ಕೇಂದ್ರೀಯ ಕಾರಾಗೃಹಕ್ಕೆ ಕರೆದೊಯ್ದು ನನ್ನ ಬೆಲ್ಟು, ಮನೆ ಬೀಗದ ಕೈ, ಮತ್ತು ಇದ್ದಬದ್ದ ಕಾಸನ್ನು ಕಸಿದುಕೊಂಡರು. ನನ್ನ ಬಳಿ ಅಡ್ರಸ್ ಬುಕ್ ಮಾತ್ರ ಉಳಿದಿತ್ತು. ಆ ಮಧ್ಯಾಹ್ನ ನನಗೆ ಕೊಟ್ಟ ಆಹಾರ ಕೊಳೆತು ನಾರುತ್ತಿದ್ದರಿಂದ ಅದನ್ನು ನಾನು ತಿನ್ನಲಿಲ್ಲ. ಜನವರಿ 20,2002ರ ಇಡೀ ದಿನ ನನ್ನನ್ನು ಅಡ್ಮಿಷನ್ ರೂಮಿನಲ್ಲೇ ಇರಿಸಲಾಗಿತ್ತು. ಮಾರನೇ ದಿನ ನನಗೆ ಒಂದು ಅಡ್ಮಿಷನ್ ಕಾರ್ಡು, ಒಂದು ತಟ್ಟೆ ಮತ್ತು ಒಂದು ಬೆಡ್‌ಶೀಟನ್ನು ಕೊಟ್ಟು ಒಂದು ಸೆಲ್ಲಿಗೆ (ಜೈಲು ಕೋಣೆ) ಕಳಿಸಿದರು. ರಾತ್ರಿ ಸುಮಾರು ಹನ್ನೊಂದರ ಹೊತ್ತಿಗೆ ಹನ್ನೆರಡು ಜನ ನನ್ನ ಬಳಿ ಬಂದು ಮಾರನೇ ಬೆಳಗ್ಗೆಯವರೆಗೆ ಗುದದ್ವಾರ ಮತ್ತು ಬಾಯಿಯ ಮೂಲಕ ಸಂಭೋಗ ಮಾಡುವಂತೆ ಬಲವಂತಪಡಿಸಿದರು. ಇದರಿಂದಾಗಿ ನನಗೆ ತೀವ್ರ ಬೆನ್ನು ನೋವು ಮತ್ತು ಗುದದ್ವಾರದ ನೋವು ಶುರುವಾಯಿತು. ನಾನು ಟಾಯ್ಲೆಟ್ಟಿಗೆ ಹೋದರೆ ನನ್ನ ಗುದದ್ವಾರದಿಂದ ವೀರ್ಯದ್ರವ(ಸೆಮೆನ್)ನಲ್ಲಿಯಿಂದ ನೀರು ಸುರಿಯುವಂತೆ ಸುರಿಯುತ್ತಿತ್ತು. ಆಮೇಲೆ ಅದರ ಜೊತೆ ಸಾಕಷ್ಟು ರಕ್ತವೂ ಬೆರೆತಿತ್ತು. ಅಷ್ಟು ಹೊತ್ತಿಗಾಗಲೇ ಬಸವಳಿದಿದ್ದ ನನಗೆ ಇದರಿಂದ ಭಯ ಶುರುವಾಯಿತು. ಕೆಲ ಖೈದಿಗಳ ಹತ್ತಿರ ಇದನ್ನು ಹೇಳಿಕೊಂಡೆ. ಅವರು

ನನ್ನನ್ನು ಇದರ ಬಗ್ಗೆ ಮಾತಾಡಿದರೆ ತಪ್ಪು ಮಾಡಿದವರ ಜೊತೆ ಜೈಲು ಅಧಿಕಾರಿಗಳು ನನಗೂ ಶಿಕ್ಷೆ ನೀಡುತ್ತಾರೆ ಎಂದು ಎಚ್ಚರಿಸಿ ಸುಮ್ಮನಿರುವಂತೆ ತಿಳಿಸಿದರು.

ಆದರೆ ಈ ವಿಷಯ ವೇಗವಾಗಿ ಹಬ್ಬಿತು. ಕೆಲವರು ನನ್ನನ್ನು ತಮಾಷೆ ಮಾಡುತ್ತಿದ್ದರು, ಕಿರುಕುಳ ನೀಡಿ, ಖೋಜಾ ಎಂದೆಲ್ಲಾ ಕರೆದು ಅವಮಾನ ಮಾಡುತ್ತಿದ್ದರು. ಇನ್ನು ಕೆಲವರಂತೂ ಮಾತೇ ನಿಲ್ಲಿಸಿಬಿಟ್ಟರು. ಅಲ್ಲಿದ್ದ ಒಬ್ಬನ ಸಹಾಯ ಪಡೆದು ಹೇಗೋ ಮಾಡಿ ಒಂದು ಪೋಸ್ಟ್ ಕಾರ್ಡ್ ಗಿಟ್ಟಿಸಿದೆ. ಜೈಲಿನಿಂದ ಬಿಡುಗಡೆಗೊಂಡು ಹೋಗುತ್ತಿದ್ದವನೊಬ್ಬನ ಕೈಲಿ ಈ ಪೋಸ್ಟ್ ಕಾರ್ಡನ್ನು ಪೋಸ್ಟ್ ಮಾಡುವಂತೆ ಕೇಳಿಕೊಂಡಿದ್ದೆ. ಅವನೂ ಸಹಾಯ ಮಾಡಿದ. ನನ್ನ ಸಹೋದರನಿಗೆ ಬರೆದ ಆ ಪತ್ರದಲ್ಲಿ ನಾನು "ಸಂಗಮ"ದ ವಿಳಾಸ ಕೊಟ್ಟು ಅಲ್ಲಿನ ಕೋಆರ್ಡಿನೇಟರ್ ಮನೋಹರ್ ಅವರನ್ನು ಸಂಪರ್ಕಿಸಬೇಕೆಂದು ಕೇಳಿಕೊಂಡಿದ್ದೆ. ಅಲ್ಲಿಂದ ಪ್ರತೀ ದಿನ ಜೈಲು ವಾಸಿಗಳನ್ನು ನೋಡಲು ಯಾರಾದರೂ ಬಂದರೆ ಅವರನ್ನು ಕರೆಯಲು ಬಳಸುತ್ತಿದ್ದ ಲೌಡ್ ಸ್ಪೀಕರ್‌ನಲ್ಲಿ ನನ್ನ ಹೆಸರು ಮೊಳಗುವುದನ್ನೇ ಕಾಯುತ್ತಿದ್ದೆ. ಹತ್ತು ದಿನಗಳ ನಂತರ ಕಷ್ಟಪಟ್ಟು ಕೆಲ ಪೋಲಿಸರಿಗೆ ಲಂಚ ಕೊಟ್ಟು ನನ್ನನ್ನು ನೋಡಲು ನನ್ನ ಸಹೋದರ ಬಂದ. ಅವನಿಗೆ ನಡೆದದ್ದನ್ನೆಲ್ಲಾ ಹೇಳಿ ಮನೋಹರ್ ಅವರನ್ನು ಕೂಡಲೇ ಸಂಪರ್ಕಿಸುವಂತೆ ತಿಳಿಸಿದೆ. ಸಂಗಮದ ಲಾಯರ್ ಒಬ್ಬರ ನೆರವಿನಿಂದ ನನ್ನ ಬಿಡುಗಡೆ ಆಯಿತು.

ಪೋಲಿಸರು ಹಮಾಮ್ಗಳನ್ನು ಪದೇ ಪದೇ ರೈಡ್ ಮಾಡಿದಾಗಲೆಲ್ಲ ಹಫ್ತಾ ವಸೂಲು ಮಾಡುವುದೇ ಅಲ್ಲದೆ ತಮ್ಮ ಅಧಿಕಾರವನ್ನು ಉಪಯೋಗಿಸಿ ಹಿಜ್ರಾಗಳು ತಮ್ಮ ಜೊತೆ ಲೈಂಗಿಕ ಚಟುವಟಿಕೆಯಲ್ಲಿ ತೊಡಗಲು ಬಲವಂತ ಮಾಡುತ್ತಾರೆ ಎಂದು ಹಿಜ್ರಾಗಳು ಹೇಳುತ್ತಾರೆ. ಹಿಂದೊಮ್ಮೆ ನಡೆದ ಘಟನೆಯ ಪ್ರಕಾರ ಒಬ್ಬ ಇನ್ಸ್‌ಪೆಕ್ಟರ್ ಮತ್ತು ಇಬ್ಬರು ಪೇದೆಗಳು ಹಮಾಮ್ ಒಂದನ್ನು ವೇಶ್ಯಾಗೃಹ ಎನ್ನುವ ಅನುಮಾನದ ಮೇಲೆ ದಾಳಿ ಮಾಡಿದರು. ಅವರು ಹೆಂಗಸರಲ್ಲ ಎಂಬುದು ತಿಳಿದುಬಂದಾಗಲೂ, ಅದನ್ನು ಖಾತ್ರಿಪಡಿಸಿಕೊಳ್ಳಲು ಅವರನ್ನೆಲ್ಲ ಬೆತ್ತಲೆ ಮಾಡಿ ನಿಲ್ಲಿಸಿದರು. ಆಮೇಲೆ, ಉಳಿದ ಗಿರಾಕಿಗಳನ್ನು ಹೊರಗೆ ಕಾಯಲು ಹಚ್ಚಿ, ಹಿಜ್ರಾಗಳು ಪ್ರತಿಯೊಬ್ಬ ಪೋಲಿಸರೊಂದಿಗೆ ಲೈಂಗಿಕ ಚಟುವಟಿಕೆಯಲ್ಲಿ ತೊಡಗುವಂತೆ ಬಲವಂತಪಡಿಸಿದರು.

ಪೋಲಿಸರಲ್ಲದೆ ಗೂಂಡಾಗಳೂ ಹಮಾಮ್‌ಗಳಲ್ಲಿ ಸುಲಭವಾಗಿ ದಕ್ಕುವ ಹಣ ಮತ್ತು ಸೆಕ್ಸ್‌ಗಾಗಿ ದಾಳಿ ಮಾಡುತ್ತಾರೆ. ಹೀಗೆ ನಡೆದ ದಾಳಿಯೊಂದರಲ್ಲಿ ಹಮಾಮ್‌ಗಳ ಮೇಲೆ ಕಲ್ಲು ತೂರಿದ ಗೂಂಡಾಗಳು ಹಿಜ್ರಾಗಳನ್ನು ಹೊರಗೆ ಬಂದು ತಮ್ಮೊಂದಿಗೆ ಲೈಂಗಿಕ ಚಟುವಟಿಕೆಯಲ್ಲಿ ತೊಡಗುವಂತೆ ಬಲವಂತಪಡಿಸಿದರು. ಟ್ಯಾನರಿ ರಸ್ತೆಯಿಂದ ಬರುತ್ತಿದ್ದ ಗೂಂಡ ಒಬ್ಬ ಹೇಗೆ ಹಮಾಮ್‌ಗೆ ಬಂದು ಒಂದೇ ಕಾಂಡೋಂ ಅನ್ನು ಮೊದಲು ಗುದದ್ವಾರದ ಸೆಕ್ಸ್ ನಂತರ ಓರಲ್ ಸೆಕ್ಸ್‌ಗೆ ಉಪಯೋಗಿಸುವಂತೆ ಹೇಳುತ್ತಿದ್ದ ಎಂದು ಹೇಳಿದರು. ಅವನು ತನ್ನ ಬಾಯಿಂದ ಪಾನ್ ಅನ್ನೂ ತೆಗೆದುಕೊಳ್ಳುವಂತೆ ಬಲವಂತ ಪಡಿಸುತ್ತಿದ್ದ

ಎಂದು ತಿಳಿಸಿದರು. ಯಾರಾದರೂ ಇದಕ್ಕೆ ವಿರೋಧಿಸಿದಲ್ಲಿ ಅವರ ಮುಖಗಳನ್ನು ಚಾಕುವಿನಿಂದ ಕತ್ತರಿಸುತ್ತೇನೆ ಅಥವಾ ಆಸಿಡ್ ಹಾಕಿ ವಿರೂಪಗೊಳಿಸುತ್ತೇನೆಂದು ಹೆದರಿಸುತ್ತಿದ್ದರಿಂದ ಅವನ ಹೇಳಿಕೆಗೆ ಮಣಿಯಬೇಕಾಗುತ್ತಿತ್ತು. ಕೆಲವರು ತಮ್ಮ ಮುಖದ ಮೇಲೆ ಇದ್ದ ಗಾಯದ ಗುರುತನ್ನು ತೋರಿಸುತ್ತಾ, ಇದು ಅವನೇ ಮಾಡಿದ್ದು ಎಂತಲೂ ಹೇಳಿದರು. ಇಂಥಹಾ ಸಂದರ್ಭಗಳಲ್ಲಿ ಹಣ ಮತ್ತೆ ಸಮಾಜಿಕ ಬಲ ಇರುವವರನ್ನೇ ಪೋಲಿಸರು ಬೆಂಬಲಿಸುವುದರಿಂದ ಅವರಿಂದ ರಕ್ಷಣೆಯ ಮಾತನ್ನೂ ಯೋಚಿಸುವುದು ಅಸಾಧ್ಯ ಎಂದು ಹಿಜ್ರಾಗಳು ಹೇಳುತ್ತಾರೆ.

## 3.7 ಅಂತಿಮ ಅಭಿಪ್ರಾಯಗಳು

ತಲ್ಲಣಗೊಳಿಸುವ ಈ ನಿರೂಪಣೆಗಳತ್ತ ಗಮನ ಹರಿಸುವ ಕೆಲಸವನ್ನು ಭಾರತದ ಮುಖ್ಯವಾಹಿನಿ ಮಾನವ ಹಕ್ಕುಗಳ ಸಮುದಾಯವು ಇನ್ನೂ ಮಾಡಬೇಕಿದೆ. ಈ ನಿರೂಪಣೆಗಳು ಅವಶ್ಯಕವಾಗಿ ಮಾನವ ದುಃಖ ಕುರಿತ ನಮ್ಮ ಅರ್ಥೈಸುವಿಕೆಯ ಭಾಗವಾಗಬೇಕು.

ಕೋಥಿಗಳು ಮತ್ತು ಹಿಜ್ರಾಗಳ ಮೇಲಿನ ಹಿಂಸೆಯನ್ನು ಅರ್ಥಮಾಡಿಕೊಳ್ಳುವಾಗ ಸ್ಪಷ್ಟವಾಗಿ ಗೋಚರಿಸುವುದೇನೆಂದರೆ – ಹಿಂಸೆಯ ಸ್ವರೂಪ ಮತ್ತು ವ್ಯಾಪಕತೆ ಮತ್ತದರ ಬೇರುಗಳು ಪ್ರಭುತ್ವ ಮತ್ತು ನಾಗರೀಕ ಸಮಾಜದಲ್ಲಿ ಆಳವಾಗಿ ಊರಿರುವುದು, ಪ್ರಭುತ್ವದ ಕಣ್ಗಾವಲಿನ ಸ್ವರೂಪ ಹಾಗು ಹಿಂಸೆಗೆ ಗಾಢವಾಗಿರುವ ಲೈಂಗಿಕ ಸ್ವರೂಪ.

ಮೇಲಿನ ಎಲ್ಲಾ ನಿರೂಪಣೆಗಳಲ್ಲೂ ವ್ಯಾಪಕವಾಗಿ, ಪದೆ ಪದೆ ಕಂಡುಬರುವ ಅಂಶವೆಂದರೆ ಲೈಂಗಿಕ ಹಿಂಸೆ. ಜೊತೆಗೆ ಹೊಡೆತ, ಆಸಿಡ್ ಬಲ್ಬ್‌ನಿಂದ ವಿರೂಪಗೊಳ್ಳುವ ಭಯದಂತಹ ದೈಹಿಕ ಹಿಂಸೆ, ಹಿಜ್ರಾಗಳ ಲೈಂಗಿಕತೆ ವಿಕೃತ ಕುತೂಹಲಕ್ಕೆ ಮತ್ತು ಘೋರ ಹಿಂಸೆಗೆ ಗುರಿಯಾಗಿರುವುದು. ಪೋಲೀಸರು, ಲೈಂಗಿಕ ಪ್ರಶ್ನೆಗಳನ್ನು ಕೇಳುವ ಮೂಲಕ, ನಗ್ನರಾಗಿಸುವುದು, ಮೊಲೆಗಳನ್ನು ಮುಟ್ಟುವುದು, ಕೆಲವು ಸಂದರ್ಭಗಳಲ್ಲಿ ಅತ್ಯಾಚಾರ ಮಾಡುವ ಮೂಲಕ ಹಿಜ್ರಾಗಳನ್ನು ಕೀಳಾಗಿ ಕಾಣುವುದು ಸಹ ನಿರೂಪಣೆಗಳಲ್ಲಿ ಕಂಡುಬರುತ್ತದೆ. ದೈಹಿಕ ಹಿಂಸೆ ಇರಲಿ ಇಲ್ಲದಿರಲಿ ಇಂತಹ ವರ್ತನೆಗಳು ವ್ಯಕ್ತಿಯ ಲೈಂಗಿಕ ಅಸ್ತಿತ್ವ ಮತ್ತು ಖಾಸಗಿತನದ ಉಲ್ಲಂಘನೆಯಾಗಿವೆ. ಕೋಥಿಗಳು ಮತ್ತು ಹಿಜ್ರಾಗಳು ಲೈಂಗಿಕ ದುಡಿಮೆಯಲ್ಲಿರುವ ಕಾರಣಕ್ಕಾಗಿ ಅವರು ಯಾವುದೇ ಲೈಂಗಿಕ ನಾಗರೀಕತ್ವದ ಹಕ್ಕುಗಳಿಗೆ ಅರ್ಹರಲ್ಲ ಎಂಬ ಭಾವನೆಯನ್ನು ಪೋಲೀಸರು ಹೊಂದಿದ್ದಾರೆನಿಸುತ್ತದೆ.

ಹಿಜ್ರಾಗಳ ಲೈಂಗಿಕತೆಯು ಇಂತಹ ಘೋರ ಹಿಂಸೆಗೆ ಯಾಕೆ ಗುರಿಯಾಗುತ್ತದೆ ಎಂಬುದರ ಕಾರಣವನ್ನು ಎರಡು ನೆಲೆಯಲ್ಲಿ ಅರ್ಥೈಸಬಹುದು. ಒಂದು – ಲೈಂಗಿಕತೆಯು ವ್ಯಕ್ತಿಯ ಅತ್ಯಂತ ಖಾಸಾವಿಷಯವಾಗಿರುವುದರಿಂದ ಲೈಂಗಿಕ ಕಿರುಕುಳ ಮತ್ತು ಹಿಂಸೆಯನ್ನು, ವ್ಯಕ್ತಿಯನ್ನು ಅತ್ಯಂತ ಹೀನಾಯವಾಗಿ ಕಾಣಲು ವ್ಯವಸ್ಥಿತ ಅಸ್ತ್ರವನ್ನಾಗಿ ನೋಡಬಹುದು. ಎರಡನೆಯದಾಗಿ ರೂಢಿಗತ ಲೈಂಗಿಕತೆಯನ್ನು ಅತಿಕ್ರಮಿಸುವುದಕ್ಕೆ ಸೂಕ್ತವಾದ ಶಿಕ್ಷೆಯಾಗಿ, ಹಿಂಸೆಯ ಲೈಂಗಿಕ ಸ್ವರೂಪವನ್ನು ಅರ್ಥಮಾಡಿಕೊಳ್ಳಬಹುದು. ಯಾಕೆಂದರೆ ಹಿಜ್ರಾಗಳ ಲೈಂಗಿಕತೆ ಮತ್ತು ಲಿಂಗ ಅನಿರ್ಧಿಷ್ಟತೆಯು

ಎದ್ದು ಕಾಣುವುದು ಪರಲಿಂಗೀಯ ಸಾಮಾಜಿಕ ವ್ಯವಸ್ಥೆಗೆ ಅತೀವ ಭೀತಿಯುಂಟುಮಾಡುತ್ತದೆ. ಹಾಗಾಗಿ, ಲೈಂಗಿಕತೆಯನ್ನೆ ಗುರಿಯಾಗಿಸಿಕೊಳ್ಳುವಂತಹ ಶಿಕ್ಷೆ ಹೆಚ್ಚು ಪರಿಣಾಮಕಾರಿ.

ಹಿಜ್ರಾ ಮತ್ತು ಕೋಥಿಗಳ ಮೇಲಿನ ಹಿಂಸೆ ಲೈಂಗಿಕ ಸ್ವರೂಪದ್ದಷ್ಟೇ ಅಲ್ಲ ಅದು ಅವರ ಬದುಕಿನ ನಿತ್ಯಸತ್ಯವಾಗಿದೆ. ಹಿಂಸೆ ಇಲ್ಲದ ಅಥವಾ ಹಿಂಸೆಯ ಭೀತಿ ಇಲ್ಲದ ಯಾವ ಜಾಗವೂ ಹಿಜ್ರಾಗಳಿಗಿಲ್ಲ. ಇದಕ್ಕೆ ಸ್ವಾತಿಯ ನಿರೂಪಣೆಯೇ ಸಾಕ್ಷಿ. ಪೋಲೀಸರು ತಮ್ಮಿಚ್ಚೆಯಂತೆ ಹಿಜ್ರಾಗಳ ಮನೆಗೆ ನುಗ್ಗಬಹುದು. ಪೋಲೀಸರ ಕಿರುಕುಳ ಮತ್ತು ಹಿಂಸೆಯ ವ್ಯವಸ್ಥಿತ ವಿಧಾನ, ಸುಲಿಗೆ ಎಲ್ಲವೂ ಹಿಂಸೆಯ ಕಾನೂನು ಬಾಹಿರತೆಯನ್ನು, ಪೋಲಿಸರ ಅಪರಾಧೀ ವರ್ತನೆಯನ್ನು ಸಾಬೀತು ಪಡಿಸುತ್ತದೆ.

ಹಿಂಸೆಯ ವ್ಯಾಪಕತೆ ಮತ್ತು ಗಾಢ ಲೈಂಗಿಕ ಸ್ವರೂಪವನ್ನು ಪೊಲೀಸರಿಗಷ್ಟೇ ಸೀಮಿತಗೊಳಿಸಿ ವಿವರಿಸಲಾಗುವುದಿಲ್ಲ. ಈ ಘೋರ ಹಿಂಸೆ ಆಳವಾಗಿ ಬೇರು ಬಿಟ್ಟಿರುವುದು ಸಾಮಾಜಿಕ ರಚನೆಗಳಲ್ಲಿ. ಬಡ ಆರ್ಥಿಕ-ಸಾಮಾಜಿಕ ಹಿನ್ನೆಲೆ, ಲೈಂಗಿಕತೆ/ ಲಿಂಗ ಅಭಿವ್ಯಕ್ತಿಯನ್ನು ಅತಿಕ್ರಮಿಸುವುದು, ಈ ಅತಿಕ್ರಮಕ್ಕಿರುವ ಅಸಮ್ಮತಿಯನ್ನು ಬೆಂಬಲಿಸುವ ನಾಗರಿಕ ಸಮಾಜದ ಸಂಸ್ಥೆಗಳು ಇವೆಲ್ಲವು ಒಂದಕ್ಕೊಂದು ತಳುಕು ಹಾಕಿಕೊಂಡು ಹಿಂಸೆಯನ್ನು ಘೋರವಾಗಿಸಿವೆ. ಜೈವಿಕವಾದ ಗಂಡಸು 'ಲಿಂಗ ಸೂಕ್ತ' ನಡವಳಿಕೆಗೆ ಅನುಗುಣವಾಗಿಯೇ ಅಂದರೆ ಗಂಡಸು, ರೂಢಿಗತ ಗಂಡಸಿನಂತೆಯೆ ವರ್ತಿಸಬೇಕೆಂಬ ನಿಯಮವಿದೆ. ಇಂತಹ ನಿಯಮಗಳನ್ನು ಕುಟುಂಬ, ಮಾಧ್ಯಮ, ವೈದ್ಯಕೀಯ ವ್ಯವಸ್ಥೆಗಳಂತಹ ಸಾಮಾಜಿಕ ಸಂಸ್ಥೆಗಳು ನಿರಂತರವಾಗಿ, ಬಲವಾಗಿ ಬೆಂಬಲಿಸುತ್ತವೆ. ಆ ಮೂಲಕ ಹಿಜ್ರಾ ಮತ್ತು ಕೋಥಿಗಳು ಅನುಭವಿಸುವ ಹಿಂಸೆಯನ್ನು ಅಧಿಕೃತಗೊಳಿಸುತ್ತವೆ ಎಂಬುದನ್ನು ಈ ವರದಿಯ ಮುಂದಿನ ಭಾಗಗಳಲ್ಲಿ ಕಾಣಬಹುದು. ಹಿಂಸೆಯ ಸ್ವರೂಪ ಮತ್ತು ತೀವ್ರತೆಯನ್ನು ವಿವರಿಸಲು ಸಾಧ್ಯವಾಗುವುದು ಕುಟುಂಬ, ಕಾನೂನು, ಮಾಧ್ಯಮ ಮತ್ತು ವೈದ್ಯಕೀಯ ವ್ಯವಸ್ಥೆಯಂತಹ ಸಾಮಾಜಿಕ ಸಂಸ್ಥೆಗಳಲ್ಲಿ ಆಳವಾಗಿ ಊರಿರುವ ಅದರ ಬೇರುಗಳನ್ನು ಎಚ್ಚರಿಕೆಯಿಂದ ಗಮನಿಸಿದಾಗ ಮಾತ್ರ ಎಂಬುದು ಈ ವರದಿಯ ಸಮರ್ಥನೆಯಾಗಿದೆ.

# ಹಿಂಸೆಯ ಸಾಂಸ್ಥೀಕೃತ ಆಧಾರವನ್ನು ಅರ್ಥಮಾಡಿಕೊಳ್ಳುವುದು

ಹಿಂದಿನ ಅಧ್ಯಾಯಗಳಲ್ಲಿ ಹಿಜ್ರಾ ಮತ್ತು ಕೋಥಿ ಲೈಂಗಿಕ ಕಾರ್ಮಿಕರ ಮೇಲಾಗುವ ಹಿಂಸೆಯನ್ನು ದಾಖಲಿಸಲಾಗಿದೆ. ಈ ಹಿಂಸೆಯ ಪ್ರಮಾಣ, ಸ್ವರೂಪ ಮತ್ತು ವಿಸ್ತಾರವನ್ನು ವಿವರಿಸುವುದು ಸುಲಭವಲ್ಲ. ಈ ಹಿಂಸೆ, ನಾಗರೀಕ ಸಮಾಜ ಮತ್ತು ರಾಜ್ಯಾಧಿಕಾರದಲ್ಲಿ ಆಳವಾಗಿ ಬೇರೂರಿದೆ ಎಂಬುದನ್ನು ಈ ವರದಿಯು ಸ್ಪಷ್ಟಪಡಿಸುತ್ತದೆ. ಹಿಂಸೆಗೆ ಯಾರು ಹೊಣೆ ಎಂಬ ಪ್ರಶ್ನೆ ಬಂದಾಗ ಹಲವಾರು ರೀತಿಯ ಸಂಸ್ಥೆಗಳು ಜಟಿಲವಾಗಿ ತಳುಕು ಹಾಕಿಕೊಂಡಿರುವುದು ಅರಿವಾಗುತ್ತದೆ. ಕೆಳಗಿನ ವಿಶ್ಲೇಷಣೆಯು, ಕುಟುಂಬ, ಕಾನೂನು, ವೈದ್ಯಕೀಯ ಕೇಂದ್ರಗಳು ಹಾಗೂ ಮಾಧ್ಯಮದಂತಹ ಸಂಸ್ಥೆಗಳು ಪದೇ ಪದೇ ನೀಡುವ ವ್ಯಾಖ್ಯಾನದಲ್ಲಿ ಲಿಂಗ ಅನಿರ್ಧಷ್ಟತೆ ಕುರಿತು ವಿಪರೀತ ಅಸಹನೆ ಇರುವುದನ್ನು ತಿಳಿಸುತ್ತದೆ. ಇವೇ ಸಂಸ್ಥೆಗಳೇ ಹಿಜ್ರಾ ಮತ್ತು ಕೋಥಿಗಳು ಅನುಭವಿಸುವ ಹಿಂಸೆಯಲ್ಲಿ ಭಾಗಿಯೂ ಆಗಿವೆ.

## *4.1 ಕುಟುಂಬ*

ಕುಟುಂಬವೆಂಬ ಸಂಸ್ಥೆಯನ್ನು ಹಿಂಸೆಯಿಂದ ಮುಕ್ತವಾದ ಸುರಕ್ಷಿತ ನೆಲೆ ಎಂದು ಸಾಮಾನ್ಯವಾಗಿ ಪರಿಗಣಿಸಲಾಗುತ್ತದೆ. ಬಹುಪಾಲು ಮಾಧ್ಯಮಗಳು ಕುಟುಂಬವನ್ನು ವ್ಯಕ್ತಿಗೆ ಸಂತೃಪ್ತಿ, ಪ್ರೀತಿ ಮತ್ತು ಶಾಂತಿಯನ್ನು ನೀಡುವ ಸ್ವರ್ಗದಂತೆ ಚಿತ್ರಿಸುತ್ತವೆ. ಇಂತಹ, ಕುಟುಂಬ ಕುರಿತ ಸಾಮಾನ್ಯ ಜ್ಞಾನಕ್ಕೆ ಅಂತರರಾಷ್ಟ್ರೀಯ ಮಾನವಹಕ್ಕುಗಳ ಕಾನೂನು ಸಹ ಒತ್ತು ನೀಡುತ್ತದೆ. ಮಾನವಹಕ್ಕುಗಳ ಕಾನೂನಿಗೆ ಆಧಾರವಾದ ಮಾನವ ಹಕ್ಕುಗಳ ವಿಶ್ವ ಘೋಷಣೆಯು "ಕುಟುಂಬವು ಸಮಾಜದ ಸಹಜ ಮತ್ತು ಮೂಲಭೂತವಾದ ಘಟಕ, ಇದು ಸಮಾಜ ಮತ್ತು ರಾಜ್ಯಾಧಿಕಾರದ ರಕ್ಷಣೆಗೆ ಅರ್ಹವಾದುದು" (ಆರ್ಟಿಕಲ್ 16) ಎಂದು ಗುರುತಿಸುತ್ತದೆ.

ಸ್ವಾತಂತ್ರ್ಯ ಮತ್ತು ಘನತೆಯ ಜೊತೆಗೆ ಮಾನವ ಹಕ್ಕುಗಳ ರಕ್ಷಣೆಗೂ ಸಹ ಅತ್ಯಗತ್ಯವಾದ ರಚನೆ ಎಂಬ ಊಹೆಯೇ ಕುಟುಂಬ ಕುರಿತ ಮೇಲಿನ ವ್ಯಾಖ್ಯಾನಕ್ಕೆ ಆಧಾರವಾಗಿದೆ. ಹಾಗಾದರೂ ಹಿಜ್ರಾ ಮತ್ತು ಕೋಥಿ ಸಮುದಾಯಗಳಿಗೆ ಕುಟುಂಬದ ಅನುಭವ ಭಯಾನಕವಾಗಿದೆ.

**ಹಿಜ್ರಾ ಮತ್ತು ಕೋಥಿಗಳ ಕಡೆಗಣಿಸುವಿಕೆಯಲ್ಲಿ ಕುಟುಂಬ ಸಂಸ್ಥೆಯು ಪ್ರಮುಖ ಪಾತ್ರವಹಿಸಿದೆ**. ಕುಟುಂಬವು ವಿವರಣೆ ಇಲ್ಲದ ಆದರೆ ಪ್ರಬಲವಾದ ನಿಯಮಗಳೊಳಗೆ ಕಾರ್ಯನಿರ್ವಹಿಸುತ್ತದೆ. ಈ ನಿಯಮಗಳು ಲಿಂಗದ ಗಡಿಗಳನ್ನು ನಿರ್ದಯವಾಗಿ ಕಾವಲು ಕಾಯುತ್ತಿರುತ್ತವೆ ಮತ್ತು ಲಿಂಗ ಅನಿರ್ಧಿಷ್ಟತೆಯ(gender non-conformity)

ರೂಪಗಳನ್ನು ತಾಳಕೊಳ್ಳಲು ಸಿದ್ಧವಿರುವುದಿಲ್ಲ.

ತಮ್ಮ ಮಕ್ಕಳಲ್ಲಿ ರೂಪುಗೊಳ್ಳುತ್ತಿರುವ ಲಿಂಗ/ಲೈಂಗಿಕತೆ ಅಸ್ಮಿತೆಗೆ(gender/ sexual identity) ಭಾರತೀಯ ಕುಟುಂಬದ ಪ್ರತಿಕ್ರಿಯೆಗಳನ್ನು ಕೆಳಗಿನ ಕಥನಗಳು ವಿಷದ ಪಡಿಸುತ್ತವೆ.

## ಸತ್ಯಕತೆಗಳು

"ನನಗೆ ನೆನಪಿರೋ ಹಂಗೆ ನಾನ್ಯಾವಾಗಲೂ ನನ್ನನ್ನು ಒಂದು ಹೆಣ್ಣಾಗಿ ಗುರುತಿಸಿಕೊಂಡಿದ್ದೀನಿ. ನನ್ನ ಊರು ತಮಿಳುನಾಡಿನಲ್ಲಿರುವ ನಮಕ್ಕಲ್ ಎಂಬ ಪುಟ್ಟ ಪಟ್ಟಣ. ನಾನು 10ನೇ ಕ್ಲಾಸಿನಲ್ಲಿ ಓದುವಾಗ ನನಗೆ ಗೊತ್ತಾಯ್ತು ನಾನು ಹಿಜ್ರಾಗಳ ಜೊತೆಲಿದ್ರೆ ಆರಾಮವಾಗಿರಬೋದು ಅಂತ. ಆಗ್ಲೆ ನಮ್ಮ ಮನೇಲಿ ಅಮ್ಮ, ಅಪ್ಪ, ಮೂರು ಜನ ಅಣ್ಣಂದಿರು ಮತ್ತು ಅಕ್ಕನಿಗೆ ನಗರದಲ್ಲಿರೊ ಹಿಜ್ರಾಗಳನ್ನು ನೋಡೋದಿಕ್ಕೆ ಪದೇ ಪದೇ ಹೋಗ್ತೀನಿ ಅಂತ ಗೊತ್ತಾಯ್ತು. ನಮ್ಮಪ್ಪ ಲಾರಿ ಡ್ರೈವರ್. ಅವರು ಎಲ್ಲೋ ಹೋಗಿದ್ದಾಗ ನಮ್ಮಣ್ಣ ಕ್ರಿಕೆಟ್ ಬ್ಯಾಟ್‌ನಲ್ಲಿ ನನ್ನ ಹೊಡೆಯೋಕೆ ಶುರು ಮಾಡ್ದ. ಅದಕ್ಕೆ ನಮ್ಮಮ್ಮನ ಕುಮ್ಮಕ್ಕು ಇತ್ತು. ಹೊಡ್ತ ತಪ್ಪಿಸಿಕೊಳ್ಳೊಕೆ ನಾನು ರೂಮೊಳಗಡೆ ಹೋಗಿ ಬೋಲ್ಟ್ ಹಾಕ್ಕೊಂಡೆ. ನಮ್ಮಮ್ಮ, ನಮ್ಮಣ್ಣ ಇಬ್ರು ಬಾಗಿಲು ಒಡೆಯೋದಕ್ಕೆ ಪ್ರಯತ್ನಪಟ್ರು ಮತ್ತೆ ಹೊಡಿಬೇಕು ಅಂತ. ನಮ್ಮ ಸಂಬಂಧಿಕರು ಕೆಲವರು ಮಧ್ಯ ಬಂದು ನನ್ನ ರೂಮಿನಿಂದ ಈಚೆ ಕರ್ಕೊಂಡ್ ಬಂದ್ರು. ನಾನು ಸತ್ಯ ಏನೂ ಅಂತ ನಮ್ಮ ಚಿಕ್ಕಪ್ಪನಿಗೆ ಹೇಳ್ದೆ. ಅವ್ರು ನನಗೆ 50 ರೂಪಾಯಿ ಕೊಟ್ರು, ಮನೆಗೆ ಹೋಗು ಅಂದ್ರು. ಆ ದುಡ್ ತಗೊಂಡು ಮನೆಗೋಗೋ ಬದ್ಲು ನಾನು ಇರೋಡಿನಲ್ಲಿದ್ದ ಹಿಜ್ರಾಗಳ ಗುಂಪಿಗೆ ಹೋದೆ.

ಅವರ ಜೊತೇಲಿ ಮೂರು ತಿಂಗಳಿದ್ದೆ. ಹಲವಾರು ಹಳ್ಳೀಲಿ, ಪಟ್ಟಣದಲ್ಲಿ ಡ್ಯಾನ್ಸ್ ಮಾಡ್ಕೊಂಡು ದುಡ್ಡು ಸಂಪಾದ್ನೆ ಮಾಡ್ತಾ ಇದ್ವಿ. ಅಲ್ಲಿಂದ ನಾನು ಡೆಲ್ಲಿಗೋದೆ. ಒಂದಿನ ನಮ್ಮ ಮನೆಯವರಿಂದ ನಮ್ಮ ಅಮ್ಮಂಗೆ ತುಂಬಾ ಹುಷಾರಿಲ್ಲ ಅಂತ ಕಾಗ್ದ ಬಂದಾಗ ಆಶ್ಚರ್ಯ ಆಯ್ತು. ಏನಾಯ್ತೊ ಅಂತ ಮನೆಗೆ ಅವಸರವಾಗಿ ಬಂದೆ. ಆದ್ರೆ ನಮ್ಮಮ್ಮ ಆರೋಗ್ಯವಾಗೇ ಇದ್ರು. ಮನೇಲಿ ನನ್ನ ಚೆನ್ನಾಗಿ ಹಿಡ್ಕೊಂಡು ಮುಖ ಮೂತಿ ನೋಡ್ದೆ ಹೊಡೆದ್ರು. ಬಲವಂತವಾಗಿ ಕೂದ್ಲು ಬೋಳಿಸಿದ್ರು. ಮನೆ ಬಿಟ್ಟು ಹೋದ್ರೆ ಕಾಲ್ ಮುರೀತಿವಿ ಅಂತ ಹೆದರಿಸಿದ್ರು, ಎಲ್ಲ ಮನೆ ಕೆಲ್ಸ ಮಾಡಿಸಿದ್ರು. ನಮ್ಮಪ್ಪನ ಲಾರಿ ಸರ್ವಿಸ್ ಸೆಂಟರ್‌ನಲ್ಲಿ ಕ್ಲೀನರ್ ಆಗು ಕೆಲ್ಸ ಮಾಡಿಸಿದ್ರು. ಐದು ತಿಂಗಳು ಹಾಗೆ ಇದ್ದೆ. ದಿನ ಬೈಯೋದು, ದೈಹಿಕವಾಗಿ ಹಿಂಸೆ ಕೊಡೋದನ್ನ ಸಹಿಸಿಕೊಳ್ಳೊಕೆ ಆಗ್ಲಿಲ್ಲ. ಮತ್ತೆ ತಪ್ಪಿಸಿಕೊಂಡು ಡೆಲ್ಲಿಗೆ ಓಡೋದೆ.

ಡೆಲ್ಲಿಯಿಂದ ಬಾಂಬೆಗೆ ಹೋದೆ. ಅಲ್ಲಿ ಒಂದು ಹಿಜ್ರಾ ಗುಂಪಿನಲ್ಲಿ ಇದ್ದೆ. ಗುಂಪಲ್ಲಿ ಬಹಳಷ್ಟು ಜನ ಅಂಗಡಿಗಳಲ್ಲಿ ದುಡ್ಡೆತ್ತಿ ಸಂಪಾದ್ನೆ ಮಾಡ್ತ ಇದ್ರು. ಅಲ್ಲಿ ಕ್ಯಾಸ್ಟ್ರೇಷನ್ ಆಪರೇಷನ್ ಮಾಡಿಸ್ಕೊಂಡೆ. ಆ ವಿಷಯ ನಮ್ಮಮ್ಮ ಅಪ್ಪನಿಗೂ ತಿಳಿಸಿದೆ. ಅಲ್ಲಿಂದ ನಮಕ್ಕಲ್‌ಗೆ ವಾಪಸ್ಸು ಬಂದೆ. ನನ್ನ ಆಪರೇಷನ್ ಬಗ್ಗೆ ಏನ್ ಹೇಳ್ಬೇಕು ಅಂತ ನಮ್ಮಮ್ಮ

ಅಪ್ಪನಿಗೆ ಗೊತ್ತಾಗಲಿಲ್ಲ. ಅವ್ರು ಸೀರೆಯಂತಹ ಹೆಂಗಸರ ಬಟ್ಟೆ ಹಾಕ್ಕೊಬೇಡ ಅಂತ ಒತ್ತಾಯ ಮಾಡಿದ್ರು. ಅದು ನಂಗೆ ಒಪ್ಗೆ ಆಗ್ಲಿಲ್ಲ. ಮತ್ತೆ ಬಾಂಬೆಗೆ ವಾಪಸ್ಸು ಬಂದೆ. ಅಲ್ಲಿ ಐದು ವರ್ಷ ಸೆಕ್ಸ್ ವರ್ಕ್ ಮಾಡ್ಕೊಂಡು, ಬದಾಯಿ ಮಾಡ್ಕೊಂಡು, ಅಂಗಡಿಗಳಲ್ಲಿ ದುಡ್ಡು ಎತ್ಕೊಂಡು ಜೀವನ ಮಾಡ್ದೆ. ಆಗಾಗ್ಗೆ ತಪ್ದೆ ಮನೆಗೂ ಹೋಗ್ತಾ ಇದ್ದೆ. ನಿಧಾನವಾಗಿ ನನ್ನ ಒಪ್ಪಿಕೊಳ್ಳೋಕೆ ಶುರು ಮಾಡಿದ್ರು. ಸೀರೆ ಉಟ್ಕೊಳ್ಳೋಕೆ ಬಿಟ್ರು. ಮನೆಗೆ ಹತ್ತಿರವಾಗಿರ್ಬೇಕು ಅಂತ ಬಾಂಬೆಯಿಂದ ಬೆಂಗಳೂರಿಗೆ ಬಂದೆ. - **ಇದು 30 ವರ್ಷ ವಯಸ್ಸಿನ ರೂಪಾ ಎಂಬ ಹಿಜ್ರಾಳ ಕತೆ.**



**ಕಲ್ಯಾಣಿ ಹೇಳುತ್ತಾಳೆ:**– ಲಿಂಗ ಬದಲಾಯಿಸಿ ಕೊಳ್ಳುವ ಆಪರೇಷನ್ ಮಾಡಿಸಿಕೊಳ್ಳಲು ಆಕೆ ನಿರ್ಧರಿಸಿದಾಗ, ಆ ಬಗ್ಗೆ ಅವಳ ಮನೆಯವರ ಬಳಿ ಮಾತನಾಡಲಾಗಲಿಲ್ಲ. ತನ್ನ ಯೋಜನೆಯನ್ನು ಮುಂದಿಟ್ಟಾಗ ಆಕೆಯ ಮನೆಯವರಿಗೆ ಹೇಯವೆನಿಸಿತು. ತನ್ನ ಯೋಜನೆಯನ್ನು ಜಾರಿಗೊಳಿಸಲು, ಮನೆಬಿಟ್ಟು ಓಡಿ ಹೋಗುವುದನ್ನು ಬಿಟ್ಟರೆ ಬೇರೆ ದಾರಿಯೇ ಇರಲಿಲ್ಲ. ಆಪರೇಷನ್ ಆದ ಮೇಲೆ, ಆಕೆಯ ತಂದೆ ಕಾಲು ಮುರಿದುಕೊಂಡಿದ್ದಾರೆಂದು ಅವಳನ್ನು ಮತ್ತೆ ನೋಡಬೇಕೆನ್ನುತ್ತಿದ್ದಾರೆಂಬುದು ತಿಳಿಯಿತು. ನೋಡುವುದಾದರೆ ಗಂಡಸರ ಉಡುಪಿನಲ್ಲಿಯೆ ಎಂಬ ಷರತ್ತು ಹಾಕಿದರು. ತನ್ನ ಆತ್ಮಗೌರವಕ್ಕೆ ಧಕ್ಕೆಯಾಗುತ್ತದೆಂಬ ಕಾರಣಕ್ಕೆ ಹೋಗುವುದನ್ನು ಕಲ್ಯಾಣಿ ನಿರಾಕರಿಸಿದಳು; ಅವಳ ತಂದೆ ಅವಳನ್ನು ನೋಡಬಯಸಿದರೆ ಅವರು ಆಕೆಯನ್ನು ಮಹಿಳೆಯರ ಉಡುಪು ತೊಟ್ಟ ಮಹಿಳೆಯಾಗಿ ಒಪ್ಪಿಕೊಂಡರೆ ಮಾತ್ರ ನೋಡುವುದೆಂದಳು. 'ತನ್ನೆದೆಯೊಳಗೆ ತಾನು ಹೆಣ್ಣು' ಎಂಬುದನ್ನು ಒಪ್ಪಿಕೊಳ್ಳಲು ಆಕೆಗೆ ಬಹಳಷ್ಟು ಸಮಯ ಹಿಡಿದಿತ್ತು ಅದನ್ನು ಈಗಿನಂತೆ ಮೊದಲು ಹೇಳಿಕೊಳ್ಳಲು ಸಾಮಾಜಿಕ ಬೆಂಬಲವಾಗಲಿ, ವೈಯಕ್ತಿಕ ಧೈರ್ಯವಾಗಲಿ ಆಕೆಗೆ ಇರಲಿಲ್ಲ.



**ನೀರ ( 21 ವರ್ಷ)** ಎಂಬುವವರು ದಿಂಡಿಗಲ್‌ನಲ್ಲಿ ಲಿಂಗ ಬದಲಾವಣೆ ಆಪರೇಷನ್ ಮಾಡಿಸಿಕೊಂಡರು. ಆಕೆ ಸೆಕ್ಸ್ ವರ್ಕ್ ಮಾಡಲು ಮನೆಯಿಂದ ಹೊರಗೆ ಹೋಗಲು ಬಯಸುತ್ತಾಳೆ. ಆದರೆ ಮನೆ ಬಿಟ್ಟು ಹೋದರೆ ಆಸ್ತಿಯಲ್ಲಿ ಪಾಲು ಕೊಡುವುದಿಲ್ಲವೆಂದು ಮನೆಯವರು ಹೇಳಿದ್ದಾರೆ. ಆಕೆ ತಾಯಿಗೆ ಅವಳ ಮೇಲೆ ಪ್ರೀತಿ ಇದೆ, ಆದರೆ ಈ ವಿಷಯ ಕುರಿತಂತೆ ತಂದೆಯ ಅಪ್ಪಣೆಯನ್ನು ಅವರು ವಿರೋಧಿಸುವುದಿಲ್ಲ.



**ವಾಸವಿ** ತನ್ನ ಕುಟುಂಬವಿರುವ ಹಳ್ಳಿಗೆ ಹೋಗಬೇಕೆಂದರೆ, ಮಗನಾಗಿಯೇ ಭೇಟಿ ನೀಡಬೇಕು. ಅವಳ ತಂದೆ ತಾಯಿಗೆ ಆಕೆಯ ಬಗ್ಗೆಯಾಗಲಿ, ಆಕೆಯ ಕೆಲಸದ ಬಗ್ಗೆಯಾಗಲಿ ಗೊತ್ತಿಲ್ಲ. ಗೊತ್ತಾಗುವುದು ಅವಳಿಗೆ ಬೇಕಿಲ್ಲ. ಕಾರಣ ಆರ್ಥಿಕವಾಗಿ ಅವರನ್ನು ಬೆಂಬಲಿಸುವುದನ್ನು ಆಕೆ ಮುಂದುವರೆಸಬಯಸುತ್ತಾಳೆ.



**ಮನೋರಮ** ಎಂಬ ಮತ್ತೊಬ್ಬ ಸೆಕ್ಸ್ ವರ್ಕರ್ "ನಾವು ಕೋಥಿಯಾಗ ಬಯಸಿದರೆ, ಕುಟುಂಬ ನಮ್ಮನ್ನು ತಿರಸ್ಕರಿಸುತ್ತದೆ. ಬದುಕುವ ಸಲುವಾಗಿ ನಾವು ಸೆಕ್ಸ್ ವರ್ಕ್ ಮಾಡಬೇಕಾಗುತ್ತದೆ" ಎಂದು ಬಿರುಸಾಗಿ ನುಡಿಯುತ್ತಾಳೆ.



**ರಾಣಿಯ** ಮನೆಯವರು ಆರ್ಥಿಕವಾಗಿ ಚೆನ್ನಾಗಿದ್ದಾರೆ. ಅವಳ ತಾಯಿ ಮತ್ತು ಅಣ್ಣಾ ಅವಳನ್ನು ಹೇಗಿದ್ದಾಳೊ ಹಾಗೆ ಒಪ್ಪಿಕೊಂಡಿದ್ದಾರೆ. ತಂದೆ ಒಪ್ಪಿಕೊಂಡಿಲ್ಲ; ಹೆಣ್ಣಿನಂತೆ ಉಡುಪು ತೊಟ್ಟ ಫೋಟೋಗಳನ್ನು ಆಕೆ ಮನೆಗೆ ಕಳುಹಿಸುತ್ತಾಳೆ. ಅವಳ ಮನೆಯವರು ಅವಳನ್ನು ಯಾವುದಾದರೂ ವ್ಯಾಪಾರದಲ್ಲಿ ತೊಡಗಿಸಲು ಇಷ್ಟಪಡುತ್ತಾರೆ ಆದರೆ ಅವಳಿಗೆ ಆಸಕ್ತಿ ಇಲ್ಲ.

ಮೇಲಿನ ನಿರೂಪಣೆಗಳು ಸಾಬೀತು ಪಡಿಸುವುದೇನೆಂದರೆ – ಸಾಮಾಜಿಕ ಸಂಸ್ಥೆಯಾಗಿ ಕುಟುಂಬವು, ಮನೋಭಾವನೆಗಳು, ಆಸ್ಮಿತೆ ಹಾಗು ವರ್ತನೆಯ ಮೂಲಕ ಲಿಂಗ ಅನಿರ್ಧಿಷ್ಟತೆಯ ಕಾವಲು ಕಾಯುತ್ತದೆ ಮತ್ತು ಆ ಮೂಲಕ ವಿರುದ್ಧ ಲಿಂಗಿ ವ್ಯವಸ್ಥೆಯನ್ನು ಪ್ರತಿಪಾದಿಸುತ್ತದೆ. ಸಮಾಜವು ನಡೆಸುವ ಹಿಂಸೆಯಿಂದ ತಮ್ಮ ಮಗುವನ್ನು ರಕ್ಷಿಸುವ ಬದಲು ಅದೇ ಹಿಂಸೆಯನ್ನು ಕುಟುಂಬವು ಪ್ರತಿಬಿಂಬಿಸುತ್ತದೆ. ನಿಜಾರ್ಥದಲ್ಲಿ ಸಮಾಜದ ಅಸಹಿಷ್ಣುತೆಯನ್ನು ಜಾರಿಗೊಳಿಸಲು ಜಾಗ ನೀಡುತ್ತದೆ. ಗಂಡಸು ಹೇಗಿರಬೇಕೆಂದು ಹೇಳುವ ಸಾಮಾಜಿಕ ನಿಯಮಗಳನ್ನು ಉಲ್ಲಂಘಿಸಿದರೆ, ನಿತ್ಯ ಅವಮಾನ, ಹೊಡೆತಕ್ಕೆ ಒಳಗಾಗಬೇಕಾಗುತ್ತದೆ, ಕುಟುಂಬದಿಂದಲೇ ಹೊರಹಾಕಲ್ಪಡುತ್ತಾರೆ.

ಇಂತಹ ಅತಿಯಾದ ಹಿಂಸೆ ಮತ್ತು ಅಸಹಿಷ್ಣುತೆಯ ಸಂದರ್ಭದಲ್ಲಿ ಅಂತರ ಲಿಂಗೀಯ ಜನರಿಗೆ ಭಾರತದಲ್ಲಿ ಲಭ್ಯವಿರುವ ಕೆಲವೇ ಸಾಂಸ್ಕೃತಿಕ ಮತ್ತು ಬೆಂಬಲವಿರುವ ಅವಕಾಶವೆಂದರೆ ಹಿಜ್ರಾ ಸಮುದಾಯ. ಹಿಜ್ರಾಗಳು ವಿಶೇಷವಾಗಿ, ಸಮುದಾಯಗಳು ಒತ್ತಾಗಿ ಹೆಣೆದುಕೊಂಡಿರುವ ಹಳ್ಳಿಗಳಲ್ಲಿ ಅತಿಯಾದ ಏಕಾಕಿತನವನ್ನು ಅನುಭವಿಸುತ್ತಾರೆ. ಅಲ್ಲಿ ಅವರಿಗಿರುವ ಒಂದೇ ಸಮಾಧಾನ, ಭರವಸೆ ಎಂದರೆ ದೊಡ್ಡ ನಗರಗಳಲ್ಲಿ ನಮ್ಮಂತಹವರು ಒಟ್ಟಿಗೆ ವಾಸಿಸುತ್ತಾರೆಂಬುದು. ಕುಟುಂಬದೊಳಗಿನ ಹಿಂಸೆಯ ಜೊತೆಗೆ ಸಣ್ಣ ಸಮುದಾಯದ ಅಸಹಿಷ್ಣುತೆಯು, ಅವಳನ್ನು ಒಪ್ಪಿಕೊಳ್ಳುವ ಸಮುದಾಯವನ್ನರಸಿ ದೊಡ್ಡ ನಗರಗಳಿಗೆ ಹೋಗುವಂತೆ ಮಾಡುತ್ತದೆ. ಇದು ಹಿಜ್ರಾ ಸಮುದಾಯವನ್ನು ಬಹುಪಾಲು ನಗರದ ವಿಷಯವನ್ನಾಗಿ ನೋಡುವಂತೆ ಮಾಡಿದೆ.

ಹಾಗಾದರೂ, ಕೆಲ ಸಮಯ ಆರ್ಥಿಕವಾಗಿ ಸ್ವತಂತ್ರರಾಗಿ ಬರುವ ಹಿಜ್ರಾಗಳನ್ನು ಸಿಟ್ಟಿನಿಂದಲೇ ಒಪ್ಪಿಕೊಳ್ಳುವಂತಹ ಬದಲಾವಣೆಯ ಮನೋಭಾವನೆಯನ್ನು ಕುಟುಂಬದಲ್ಲಿ ಕಾಣಬಹುದು ಎಂಬುದನ್ನು ಸಹ ಮೇಲಿನ ನಿರೂಪಣೆಗಳು ತಿಳಿಸುತ್ತವೆ. ಕೆಲವು ಸಂದರ್ಭಗಳಲ್ಲಿ ಕುಟುಂಬಕ್ಕೆ ಆಧಾರವಾಗುವಷ್ಟು ಆರ್ಥಿಕವಾಗಿ ಸಮರ್ಥರಾದ ಹಿಜ್ರಾಗಳು ಹಿಂತಿರುಗಿ ಬರುವುದು ಸಂತೋಷದ ವಿಷಯುವಾದರೂ ಈಗಲೂ ಸೆಕ್ಸ್‌ವರ್ಕ್ ಮಾಡುತ್ತಾರೆಂಬ ವಿಷಯ ಒಪ್ಪಿಗೆಯನ್ನು ಕಷ್ಟಸಾಧ್ಯವಾಗಿಸುತ್ತದೆ.

ಪರ್ಯಾಯ ಲೈಂಗಿಕತೆ ಹಾಗೂ ಸೆಕ್ಸ್‌ವರ್ಕ್ ಸುತ್ತಲಿನ ಉಲ್ಲಂಘನೆಯನ್ನು ಅತ್ಯಂತ ಕಳಂಕ ಪ್ರಾಯವೆಂದು ಪರಿಗಣಿಸುವುದರಿಂದಾಗಿ ತಮ್ಮ ಮಕ್ಕಳನ್ನು ಒಪ್ಪಿಕೊಳ್ಳುವುದು ಕುಟುಂಬಗಳಿಗೆ ಕಷ್ಟಕರವಾಗುತ್ತದೆ. ತಮ್ಮ ಮಕ್ಕಳ ಲೈಂಗಿಕತೆ ಮತ್ತು ಲಿಂಗ ಅಸ್ಮಿತೆ ಹಾಗು ವರ್ತನೆಯನ್ನು ಅರ್ಥ ಮಾಡಿಕೊಳ್ಳಲು ಕುಟುಂಬಗಳಿಗೆ ಇರುವ ಸಾಂಸ್ಕೃತಿಕ/ ಸಾಮಾಜಿಕ ಸಂಪನ್ಮೂಲಗಳು ಅತ್ಯಂತ ಕಡಿಮೆ. ಹಾಗಾದರೂ ಮೇಲಿನ ಕತೆಗಳು, ಸಿಟ್ಟಿನಿಂದಲಾದರೂ ತಮ್ಮ ಮಕ್ಕಳ ಅಸ್ಮಿತೆಯನ್ನು ಒಪ್ಪಿಕೊಳ್ಳುವತ್ತ ಕುಟುಂಬದ ಸದಸ್ಯರುಗಳು ನಡೆದಿದ್ದಾರೆಂಬುದನ್ನು ವಿಷದ ಪಡಿಸುತ್ತವೆ.

### *4.2 ಕಾನೂನು*

ಭಾರತದ ಕಾನೂನು, ಹಿಜ್ರಾ ಮತ್ತು ಕೋಥಿ ಸಮುದಾಯಗಳನ್ನು ನಿಯಂತ್ರಿಸುವ ಪ್ರಬಲ ಶಕ್ತಿಯಾಗಿದೆ. ಅದು ಹಿಜ್ರಾಗಳು ಮತ್ತು ಕೋಥಿಗಳ ಇರುವಿಕೆಯನ್ನು ಅಪರಾಧಿಕರಣಗೊಳಸಿದೆ, ಅವರ ಬದುಕಿನಲ್ಲಿ ಪೊಲೀಸರು ಸರ್ವವ್ಯಾಪಿ ವಾಸ್ತವವಾಗಿಬಿಟ್ಟಿದ್ದಾರೆ. ಅಪರಾಧ ಕಾನೂನುಗಳಿಂದಾಗಿ ಅವರ ಬದುಕಿನ ಮೇಲೆ ಪೊಲೀಸರಿಗೆ ಅಸಮರ್ಥನೀಯ ಅಧಿಕಾರ ಸಿಕ್ಕಿದೆ. ಇದರ ಜೊತೆಗೆ ಕಾನೂನಿನ ನಾಗರೀಕ ಅಂಶವು ಸಹ ಹಿಜ್ರಾ ಮತ್ತು ಕೋಥಿಗಳಿಗೆ ಪೌರತ್ವ ಮತ್ತು ಸಮಾನತೆಯ ಬೇಡಿಕೆಗಳಿಗೆ ಗಮನ ನೀಡಿಲ್ಲ. ಈ ಅಧ್ಯಾಯದಲ್ಲಿ ಈ ಕೆಳಗಿನವುಗಳಿಗೆ ಒತ್ತು ನೀಡಲಾಗಿದೆ.

- ಐತಿಹಾಸಿಕ ಹಿನ್ನೆಲೆ : ದಿ ಕ್ರಿಮಿನಲ್ ಟ್ರೈಬ್ಸ್ ಆಕ್ಟ್ 1871
- ಭಾರತೀಯ ದಂಡ ಸಂಹಿತೆಯ ಸೆಕ್ಷನ್ 377
- ಇಮ್ಮಾರಲ್ ಟ್ರಾಫಿಕ್ಕಿಂಗ್ ಪ್ರಿವೆನ್‌ಶನ್ ಆಕ್ಟ್ 1986
- ನಾಗರೀಕ ಕಾನೂನುಗಳು

#### **4.2.1 ಐತಿಹಾಸಿಕ ಹಿನ್ನೆಲೆ : ದಿ ಕ್ರಿಮಿನಲ್ ಟ್ರೈಬ್ಸ್ ಆಕ್ಟ್, 1871**

ಹಿಜ್ರಾ ಸಮುದಾಯದ ಮೇಲಿನ ಸಮಕಾಲೀನ ಹಿಂಸೆಯ ಬೇರುಗಳನ್ನು, ವಸಾಹತುಶಾಹಿ ಭಾರತದಲ್ಲಿ ಐತಿಹಾಸಿಕ ರೂಪ ಪಡೆದುಕೊಂಡ ಆಧುನಿಕ ಕಾನೂನಿನಲ್ಲಿ ಕಾಣಬಹುದಾಗಿದೆ. ಇದು ಕ್ರಿಮಿನಲ್ ಟ್ರೈಬಲ್ ಆಕ್ಟ್ 1871 ಎಂಬ ಕಾಯ್ದೆಯ ರೂಪ ಪಡೆಯಿತು. ಇದು ಎಂತಹ ಅಸಧಾರಣವಾದ ಕಾಯ್ದೆ ಎಂದರೆ ಭಾರತೀಯ ದಂಡ ಸಂಹಿತೆಗೆ ಆಧಾರವಾಗಿರುವ ತತ್ವಗಳಿಂದಲೇ ದೂರವಾಗಿದೆ. ಭಾರತೀಯ ದಂಡ ಸಂಹಿತೆಯಡಿ ಅಪರಾಧವನ್ನು ಸ್ಥಿರ ಪಡಿಸಬೇಕಾದರೆ ಅಪರಾಧಿಯ ಮೇಲಿನ ಆರೋಪವನ್ನು ನ್ಯಾಯಾಲಯದಲ್ಲಿ ಯುಕ್ತ ಅನುಮಾನಗಳಿಂದಾಚೆಗೂ ಸಾಬೀತು ಪಡಿಸಬೇಕು. ಕೆಲವು ಆದಿವಾಸಿಗಳು ಮತ್ತು ಸಮುದಾಯಗಳು ವ್ಯವಸ್ಥಿತವಾಗಿ ಜಾಮೀನು ನೀಡದಂತಹ ಅಪರಾಧಗಳನ್ನು ಮಾಡುವುದರ ಚಟ ಬೆಳೆಸಿಕೊಂಡಿದ್ದರಿಂದಾಗಿ ಅವರೊಂದಿಗೆ ಸಂಪೂರ್ಣವಾಗಿ ವ್ಯವಹರಿಸಲು ಈ ನಾಗರೀಕ ನ್ಯಾಯಶಾಸ್ತ್ರವು ಸಾಕಾಗುತ್ತಿರಲಿಲ್ಲವೆಂಬುದು ಬ್ರಿಟೀಷರ ಭಾವನೆಯಾಗಿತ್ತು.

ಈ ಸಮುದಾಯಗಳು ಮತ್ತು ಆದಿವಾಸಿಗಳು ಹುಟ್ಟಿನಿಂದಲೇ ಅಪರಾಧಿಗಳಾಗಿದ್ದು, ಸಂತತಿಯಿಂದ ಸಂತತಿಗೆ ಈ ಅಪರಾಧಗುಣ ಹರಿದು ಬರುತ್ತದೆ ಎಂದು ಗ್ರಹಿಸಲಾಗಿತ್ತು. ಈ ಗ್ರಹಿಕೆ ಕೆಲ ಸಮುದಾಯಗಳು ಹುಟ್ಟಿನಿಂದಲೇ ಗಲೀಜು ಮತ್ತು ಅಪವಿತ್ರರೆಂದು ಪರಿಗಣಿಸಿರುವ

ಶ್ರೇಣಿಕೃತ ಭಾರತೀಯ ಸಾಮಾಜಿಕ ರಚನೆಯೊಳಗೆ ಚೆನ್ನಾಗಿ ಹೊಂದಿಕೊಂಡಿತು. ಅಪರಾಧಿ ಜನಾಂಗ ಎಂಬ ವಿಷಯವು 'ಅಪರಾಧವು ಒಂದು ವೃತ್ತಿಯಾಗಿ ಒಂದು ಅಪರಾಧಿ ಜಾತಿಯಿಂದ ಮತ್ತೊಂದು ಜಾತಿಗೆ ಹರಿದು ಬರುತ್ತದೆ ಎಂಬ ಕಲ್ಪನೆಯನ್ನು ಆಧರಿಸಿದೆ; ಬಡಗಿಯೊಬ್ಬ ತನ್ನ ಕಸುಬನ್ನು ಮುಂದಿನ ಸಂತತಿಗೆ ನೀಡುವಂತೆ, ಅನುವಂಶೀಯ ಅಪರಾಧಿ ಜಾತಿಯ ಸದಸ್ಯರು ಈ ವೃತ್ತಿಯನ್ನು ತಮ್ಮ ಮಕ್ಕಳಿಗೆ ನೀಡುತ್ತಾರೆಂದು ಕಲ್ಪಿಸಲಾಗಿತ್ತು.

ಒಂದು ಸಾರಿ ಒಂದು ಆದಿವಾಸಿ ಜನಾಂಗವನ್ನು ಅಪರಾಧಿ ಆದಿವಾಸಿಗಳೆಂದು ಅದಿಸೂಚನೆಗೊಳಸಿದರೆ ಮಹಿಳೆ, ಮಕ್ಕಳು ಸೇರಿದಂತೆ ಆ ಗುಂಪಿನ ಎಲ್ಲ ಸದಸ್ಯರು ನಿರ್ಧಿಷ್ಟ ಅಧಿಕಾರಿಯ ಬಳಿ ನೊಂದಾಯಿಸಬೇಕು.

ಒಂದು ಸಾರಿ ಗುಂಪಿನ ಸದಸ್ಯರೊಬ್ಬರು ನೊಂದಾಯಿಸಲ್ಪಟ್ಟರೆ ಆತ/ಆಕೆ ಇರುವ ಸ್ಥಳ ಅಥವ ಸಂದರ್ಭಗಳನ್ನು ಕಳ್ಳತನ ಅಥವ ದರೋಡೆಯ ಅವಕಾಶಕ್ಕಾಗಿ ಕಾಯುತ್ತಿದ್ದರೆಂದು ಕೋರ್ಟಿಗೆ ಸಾಬೀತು ಪಡಿಸಿದರೆ ಆತ/ಆಕೆಗೆ ಮೂರು ವರ್ಷದ ಜೈಲು ವಾಸದ ಶಿಕ್ಷೆ ನೀಡಬಹುದು. ನೊಂದಾವಣೆಯಾದ ವ್ಯಕ್ತಿಯ ಚಲನವಲನವು ಅಧಿಕಾರಿಯು ಸೂಚಿಸುವ ಮಿತಿಯೊಳಗೆ ನಿಯಂತ್ರಿಸಲ್ಪಡುತ್ತಿತ್ತು. ಅದರ ಹೊರಗಡೆ ಚಲನವಲನ ಕಂಡುಬಂದರೆ ಆತನನ್ನು ಬಂಧಿಸಬಹುದು. ಉಲ್ಲಂಘನೆಯ ನಿಯಮಗಳಡಿ ನೊಂದಾವಣೆಯಾದ ವ್ಯಕ್ತಿಗೆ ಹಲವಾರು ನಿರ್ಬಂಧಗಳನ್ನು ಹೇರಲಾಗುತ್ತಿತ್ತು. ದಂಡ ಹಾಕುವುದರಿಂದ ಹಿಡಿದು ಜೈಲು ವಾಸದವರೆಗೂ ಶಿಕ್ಷೆ ನೀಡಲಾಗುತ್ತಿತ್ತು. ಇವೆಲ್ಲ ವ್ಯವಸ್ಥೆಗಳು ವಸಾಹತುಶಾಹಿ ಪ್ರಜೆಗಳಿಗೆ ಅರ್ಹವಾಗಿದ್ದ ಮೂಲಭೂತ ಸ್ವಾತಂತ್ರ್ಯಗಳನ್ನು ಉಲ್ಲಂಘಿಸಿವೆ. ಅಲ್ಲದೆ, ತಮ್ಮ ಇರುವಿಕೆಗೆ ಅಪರಾಧಿ ಜನಾಂಗವು ಯಾವಾಗಲೂ, ಭೀತಿಯುಂಟು ಮಾಡುವುದೆಂದು ಪೋಲೀಸರು ಭಾವಿಸುತ್ತಿದ್ದರು. ಈ ಕಾರಣಕ್ಕಾಗಿಯೇ ಅಪರಾಧಿ ಜನಾಂಗಕ್ಕೆ ಪೋಲೀಸರೊಂದಿಗೆ ವಿವಾದವಾಗೇ ತೀರುತ್ತಿತ್ತು.

ಅಲೆಮಾರಿ ಜನಾಂಗಗಳು ವ್ಯಭಿಚಾರಿ ಜೀವನಶೈಲಿಯನ್ನು ಹೊಂದಿವೆ ಎಂಬ ವಸಾಹತುಶಾಹಿ ಆಡಳಿತದ ಗ್ರಹಿಕೆಯಿಂದಾಗಿಯೇ ಅಪರಾಧಿ ಜನಾಂಗ ಮತ್ತು ಲಿಂಗ ಅನಿರ್ಧಿಷ್ಟತೆಗೆ ಸಂಪರ್ಕ ಕಲ್ಪಿಸಲಾಗಿದೆ. ಅಲೆಮಾರಿ ಜನಾಂಗಗಳು ಮನೋರಂಜನೆ ನೀಡುವ ದೊಂಬರಾಟದವರು, ಹಾಡುಗಾರರು, ಕುಣಿತದವರು, ಹಗ್ಗದ ಮೇಲೆ ನಡೆಯುವವರು ಮತ್ತು ಶಕುನ ನುಡಿಯುವವರನ್ನೊಳಗೊಂಡಿದೆ. ಇವರೆಲ್ಲರು ಚಲಿಸದ ಸಮಾಜಗಳ ನಿಯಮಗಳಿಗೆ ಭೀತಿಯುಂಟು ಮಾಡುವವರೆಂದು ಪರಿಗಣಿಸಲಾಗುತ್ತಿತ್ತು. ಮೀನಾರಾಧಾಕೃಷ್ಣರವರು ...... "ಅಲೆಮಾರಿಗಳಿಗೆ ಆಸ್ತಿ ಇಲ್ಲದಿರುವುದು, ಬೇರೆಯವರ ಆಸ್ತಿಯ ಬಗ್ಗೆ ಕಾಳಜಿ ಇಲ್ಲದಿರುವುದು ಇವು ಸ್ಥಾಪಿತ ಮಾದರಿಗೆ ಭೀತಿಯುಂಟು ಮಾಡುತ್ತವೆ ಎಂದು ನೋಡಲಾಗುತ್ತದೆ. ಚಲಿಸದ ಸಮಾಜಗಳ ಕಟ್ಟುನಿಟ್ಟಿನ ನಿಯಮಗಳು ಮತ್ತು ನಿರ್ಬಂದಗಳಿಂದ ಅವರು ಸ್ವತಂತ್ರರಾಗಿರುವುದನ್ನು ಅತ್ಯಂತ ಆಕ್ಷೇಪಾರ್ಹವೆಂದು ಪರಿಗಣಿಸಲಾಗಿದೆ. ನಿಜಾರ್ಥದಲ್ಲಿ ಅಲೆಮಾರಿತನವನ್ನು, ಜಾತಿ ಬಾಹಿರರು ಮತ್ತು ಚಲಿಸದ ಸಮಾಜಗಳನ್ನು ಒಪ್ಪಿಕೊಳ್ಳದಿರುವವರು ತಪ್ಪಿಸಿಕೊಳ್ಳಲು ಇರುವ ಸಾಧ್ಯತೆ ಎಂದು ನೋಡಲಾಗುತ್ತದೆ.......... ಜೊತೆಗೆ ಸಮಾಜದ ನೈತಿಕತೆಯನ್ನು ಕಾಯುವವರಿಗೆ, ಅವರಲ್ಲಿ ಕಾಣುವಂತಹ ಸಾಮಾಜಿಕ ಸಂಸ್ಥೆಗಳು ಇಲ್ಲದಿರುವುದರಿಂದ ಅವರ ಸಮುದಾಯಿಕ ಜೀವನ ಸಂಪೂರ್ಣ ಅವ್ಯವಸ್ಥೆಯಾಗಿ ಕಾಣಿಸುತ್ತದೆ. ಅವರ ಅಲಿಖಿತ ವರ್ತನಾ ಸಂಹಿತೆಗಳು, ಸ್ಪಷ್ಟ ನೈತಿಕತೆಯ ನಿಯಮಗಳು ಇಲ್ಲದಿರುವುದು ಸಂಪೂರ್ಣ ವ್ಯಭಿಚಾರತನವನ್ನು ಧ್ವನಿಸುತ್ತದೆ" ಎಂದು ಹೇಳುತ್ತಾರೆ.

ಕ್ರಿಮಿನಲ್ ಟ್ರೈಬ್ಸ್ ಆಕ್ಟ್ 1871ನ್ನು 1897ರಲ್ಲಿ ತಿದ್ದುಪಡಿ ಮಾಡಿದಾಗ ಅಪರಾಧಿತನ ಮತ್ತು ಲಿಂಗ ಅನಿರ್ಧಿಷ್ಟತೆಯ ನಡುವಿನ ಸಂಪರ್ಕ ಹೆಚ್ಚು ಸ್ಪಷ್ಟವಾಯಿತು. ಅದನ್ನು 'ಆನ್ ಆಕ್ಟ್ ಫಾರ್ ದಿ ರಿಜಿಸ್ಟ್ರೇಷನ್ ಆಫ್ ಕ್ರಿಮಿನಲ್ ಟ್ರೈಬ್ಸ್ ಅಂಡ್ ಯೂನಕ್ಸ್' (ಅಪರಾಧ ಜನಾಂಗ ಮತ್ತು ಹಿಜ್ರಾ ನೊಂದಾವಣೆಗಾಗಿ ಕಾಯ್ದೆ) ಈ ಕಾಯ್ದೆಯು 'ತಾವೆ ಒಪ್ಪಿಕೊಳ್ಳುವ ಅಥವ ವೈದ್ಯಕೀಯ ತಪಾಸಣೆಯ ಮೂಲಕ ನಪುಂಸಕರೆಂದು ಗೋಚರಿಸುವ ಗಂಡು ಜಾತಿಗೆ ಸೇರಿದ ಎಲ್ಲ ಸದಸ್ಯರನ್ನು ಒಳಗೊಳ್ಳುತ್ತದೆ. ಸ್ಥಳೀಯ ಆಡಳಿತವು ಎಲ್ಲ ಹಿಜ್ರಾಗಳ ಹೆಸರು, ವಿಳಾಸಗಳ ರಿಜಿಸ್ಟರ್‌ನ್ನು ಇಡಬೇಕಾಗಿತ್ತು. ಇವರು ಮಕ್ಕಳನ್ನು ಕದ್ದೊಯ್ಯುವ ಅಥವ ನಿರ್ವಿರ್ಯರನ್ನಾಗಿಸುವ ಅಥವ ಭಾರತೀಯ ದಂಡಸಂಹಿತೆಯ ಸೆಕ್ಷನ್ 377ರ ಪ್ರಕಾರ ಅಪರಾಧ ಮಾಡುವ ಸಾಧ್ಯತೆ ಇರುವವರು. ಆ ರೀತಿ ನೊಂದಾಯಿತರಾದ ಯಾವುದೇ ಹಿಜ್ರಾ ಸಾರ್ವಜನಿಕ ರಸ್ತೆಯಲ್ಲಿ ಹೆಂಗಸಿನಂತೆ 'ಉಡುಪು ಧರಿಸಿದ್ದರೆ ಅಥವ ಅಲಂಕರಿಸಿಕೊಂಡಿದ್ದರೆ......... ಅಥವ ನರ್ತಿಸುವ ಅಥವ ಹಾಡುವ ಅಥವ ಯಾವುದೇ ಸಾರ್ವಜನಿಕ ಪ್ರದರ್ಶನದಲ್ಲಿ, ರಸ್ತೆಯಲ್ಲಿ ಭಾಗವಹಿಸಿದರೆ...... ವಾರೆಂಟ್ ಇಲ್ಲದೆ ಬಂಧಿಸಬೇಕು (ಬಹುದು) ಮತ್ತು ಎರಡು ವರ್ಷದವರೆಗಿನ ಸಜೆ ಅಥವ ದಂಡ ಅಥವ ಎರಡನ್ನು ಶಿಕ್ಷೆಯಾಗಿ ನೀಡಬಹುದು'. ನೊಂದಾಯಿಸಿರುವ ಹಿಜ್ರಾ ಬಳಿ 16 ವರ್ಷಕ್ಕಿಂತ ಕಡಿಮೆ ವಯಸ್ಸಿನ ಹುಡುಗ ಅವನ ನಿಯಂತ್ರಣದಲ್ಲಿದ್ದರೆ ಅಥವ ಆತನ ಮನೆಯಲ್ಲಿ ವಾಸಿಸುತ್ತಿದ್ದರೆ ಆತನಿಗೆ ಎರಡು ವರ್ಷದವರೆಗಿನ ಸಜೆ ಅಥವ ದಂಡ ಅಥವ ಎರಡನ್ನು ಶಿಕ್ಷೆಯಾಗಿ ನೀಡಬಹುದು. ಹಿಜ್ರಾಗಳನ್ನು ಪೋಷಕರಾಗಲು, ಉಡುಗೊರೆ ನೀಡಲು, ಉಯಿಲು ಬರೆಯಲು, ಮಗನನ್ನು ದತ್ತು ತೆಗೆದುಕೊಳ್ಳಲು ಅನರ್ಹರೆಂದು ಪರಿಗಣಿಸಲಾಗಿತ್ತು. ಅಪರಾಧ ಜನಾಂಗ ಕುರಿತು ಬ್ರಿಟಿಷ್ ಅಧಿಕಾರಿಯೊಬ್ಬರು ಬಳಸಿರುವ ವಾಕ್ಯವು ಹಿಜ್ರಾಗಳನ್ನು ಕುರಿತ ವಸಾಹತುಶಾಹಿ ಗ್ರಹಿಕೆಯನ್ನು ವಿವರಿಸಲು ಸೂಕ್ತವಾಗಿದೆ. 'ಅವರು ಸಂಪೂರ್ಣವಾಗಿ ಕಲ್ಮಶರು, ಭಾರತೀಯ ಜೀವನದಿಂದ ಹೊರ ಹಾಕಲ್ಪಟ್ಟ ನಿರುಪಯುಕ್ತ ವಸ್ತುಗಳು ಬಯಲಿನ ಪ್ರಾಣಿಗಳಿಗಿಂತ ಹೆಚ್ಚೇನು ಗೌರವವಿಲ್ಲದವರು'.

ಹೀಗೆ ಹಿಜ್ರಾಗಳ ಲಿಂಗ ಅನಿರ್ಧಿಷ್ಟತೆಯು ವಸಾಹತುಶಾಹಿ ಆಡಳಿತದಿಂದ ತೀವ್ರ ಖಂಡನೆ, ದಂಡನೆಗಳನ್ನು ಪಡೆಯಿತು. ಹಿಜ್ರಾ ಆಗಿರುವುದೇ, ನಿತ್ಯ ಕಣ್ಗಾವಲಿನಲ್ಲಿ ಇರುವ ಅಪರಾಧ ವೃತ್ತಿಯಂತಿತ್ತು. ಕಣ್ಗಾವಲಿನ ವ್ಯವಸ್ಥೆಯು ವಿರುದ್ಧ ಲಿಂಗಿಗಳ ಉಡುಪು ಧರಿಸುವುದನ್ನೆ ಅಪರಾಧವೆಂದು ಪರಿಗಣಿಸುವ ಮೂಲಕ ಹಿಜ್ರಾಗಳ ಇರುವಿಕೆಯ ವಾಸ್ತವವನ್ನೇ ಅಪರಾಧೀಕರಣಗೊಳಿಸಿತು.

ಅವರ ಹಾಡು ಮತ್ತು ಕುಣಿತದಂತಹ ಜೀವನೋಪಾಯಗಳನ್ನೆ ಅಪರಾಧೀಕರಣ ಗೊಳಿಸಲಾಯಿತು. ಅಪರಾಧ ಕಾರ್ಯ ಜರುಗಬಹುದೆಂಬ ಊಹೆಯ ಮೇಲೆ ಅವರ ಇರುವಿಕೆಯ ಪ್ರತಿಯೊಂದು ಅಂಶವನ್ನು ಅಪರಾಧೀಕರಣಗೊಳಿಸಲಾಯಿತು. ಹೀಗೆ ಹಿಜ್ರಾಗಳ ಬದುಕಿನಲ್ಲಿ ಪೋಲೀಸರ ಸಮ್ಮುಖವು ಪ್ರತ್ಯಕ್ಷ ಹಾಗು ಮಿತಿ ಮೀರಿದ ನಿತ್ಯ ಸತ್ಯವಾಯಿತು. ಉಡುಗೊರೆ ನೀಡುವಂತಹ ಅಥವ ಮಗನನ್ನು ದತ್ತು ತೆಗೆದುಕೊಳ್ಳುವಂತಹ ಮೂಲಭೂತ ಹಕ್ಕುಗಳನ್ನು ಕಿತ್ತುಕೊಳ್ಳುವ ಮೂಲಕ ಹಿಜ್ರಾಗಳ ವ್ಯಕ್ತಿತ್ವವನ್ನೆ ಅಳಿಸಿ ಹಾಕಲಾಯಿತು. ಅಪರಾಧಿ ಆದಿವಾಸಿಗಳ ಕುರಿತು ಕೆಲವು ಸಂಶೋಧನಾ ಕೆಲಸಗಳಾಗಿವೆ. ಆದರೆ ವಸಾಹತುಶಾಹಿ ಭಾರತದಲ್ಲಿ ಪೂರ್ವಾಗ್ರಹಳಿಂದ ಕೂಡಿದ ವಸಾಹತುಶಾಹಿ ವ್ಯವಸ್ಥೆಯು ಹಿಜ್ರಾಗಳ ಮೂಲಭೂತ ಹಕ್ಕುಗಳನ್ನು ಕಿತ್ತುಕೊಂಡು, ಕಡೆಗಣಿಸಿದ್ದನ್ನು ಕುರಿತ ಸಂಶೋಧನೆಗಳು ನಡೆದಿಲ್ಲ. ಹಾಗಾದರೂ ಅಪರಾಧಿ

ಆದಿವಾಸಿಗಳ ಪರಿಸ್ಥಿತಿಯನ್ನೇ ಹಿಜ್ರಾಗಳಿಗೂ ಅನ್ವಯಿಸಬಹುದಾಗಿದೆ. ಕಾನೂನಿನ ಮೂಲಕ ಮತ್ತು ಅದರಾಚೆಗೆ ಪೋಲೀಸರು ನೀಡುತ್ತಿದ್ದ ಹಿಂಸೆಯು ಹಿಂದೆ ಅಪರಾಧಿ ಆದಿವಾಸಿಗಳ ಬದುಕನ್ನು ನಿಯಂತ್ರಿಸುತ್ತಿದ್ದಂತೆ, ಹಿಜ್ರಾಗಳ ಬದುಕನ್ನು ನಿಯಂತ್ರಿಸುತ್ತಿತ್ತು. ಆಶ್ಚರ್ಯವೆನಿಸುವಷ್ಟು ಸಮಾನ ಅಂಶಗಳಿದ್ದರೂ ಅವರದು ಕಳಂಕಿತ ಸ್ವರೂಪದ ಲೈಂಗಿಕತೆಯಾಗಿದ್ದರಿಂದ ರಾಷ್ಟ್ರೀಯ ಅಥವ ಸಬಾಲ್ಟರ್ನ್ ಇತಿಹಾಸಗಳಲ್ಲಿ ಅವರ ದನಿ ದಾಖಲಾಗಲಿಲ್ಲ.

ಅಪರಾಧಿ ಆದಿವಾಸಿಗಳದ್ದು ಕಷ್ಟದ ಬದುಕಾದರೂ ಸಹ ರಾಷ್ಟ್ರೀಯ ಚಳವಳಿಯಲ್ಲಿ ಅವರ ಪರವಾದ ದನಿಗಳಿದ್ದವು. ಉದಾಹರಣೆಗೆ ಜವಹರ್‌ಲಾಲ್ ನೆಹರುರವರು "...... ನಾಗರೀಕ ಸ್ವಾತಂತ್ರ್ಯವನ್ನು ಉಲ್ಲಂಘಿಸುವ ರಾಕ್ಷಸಿ ಪ್ರವೃತ್ತಿಯ ಕ್ರಿಮಿನಲ್ ಟ್ರೈಬ್ ಕಾಯ್ದೆ ಬಗ್ಗೆ ನನಗೆ ಅರಿವಿದೆ. ಈ ಕಾಯ್ದೆಯನ್ನು ಕಿತ್ತುಹಾಕುವ ಪ್ರಯತ್ನಮಾಡಬೇಕಾಗಿದೆ. ಯಾವ ಆದಿವಾಸಿಗಳನ್ನು ಅಪರಾಧಿಗಳೆಂದು ಪರಿಗಣಿಸಬಾರದು. ಇಡೀ ತರ್ಕವೇ, ಅಪರಾಧನ್ಯಾಯ ಮತ್ತು ತಪ್ಪಿತಸ್ಥರನ್ನು ನೋಡಿಕೊಳ್ಳುವ ಕುರಿತ ನಾಗರೀಕ ತತ್ವಗಳಿಗೆ ವಿರುದ್ಧವಾಗಿದೆ" ಎಂದು ಹೇಳಿದ್ದಾರೆ. ಹಿಜ್ರಾಗಳ ಪರಿಸ್ಥಿತಿ ಭಿನ್ನವಾಗಿತ್ತು. ಎಲ್ಲಾ ವ್ಯಾಖ್ಯಾನಗಳಲ್ಲೂ ಅವರ ಕಡೆಗಣಿಸಲ್ಪಟ್ಟರು. ಅಪರಾಧ ಕಾಯ್ದೆಗಳಲ್ಲಿ ಅವರ ಲೈಂಗಿಕತೆ ಮತ್ತು ಲಿಂಗ ಅಸ್ಮಿತೆಯನ್ನು ಅಪರಾಧಿತನದ ಸ್ಥಿತಿಯಾಗಿ ಗ್ರಹಿಸಲಾಯಿತು. ಮತ್ತು ನಾಗರೀಕ ಕಾನೂನುಗಳ ವ್ಯಾಖ್ಯಾನಗಳಲ್ಲಿ ಇತರೆ ವಸಾಹತುಶಾಹಿ ಪ್ರಜೆಗಳಿಗಿದ್ದ ಕನಿಷ್ಟ ಹಕ್ಕುಗಳು ಇಲ್ಲದವರಾಗಿ ಅವರು ಹೊರ ಹೊಮ್ಮಿದರು.

ಈ ಐತಿಹಾಸಿಕ ಹಿನ್ನೆಲೆಯ ಪ್ರಾಮುಖ್ಯತೆ ಏನೆಂದರೆ, ಪ್ರಸ್ತುತ ಸಂದರ್ಭದಲ್ಲಿ ಹಿಜ್ರಾಗಳನ್ನು ಕಳ್ಳರೆಂದು ಪರಿಗಣಿಸುವುದು ಮತ್ತು ಅವರ ಮೇಲೆ ಆಗುತ್ತಿರುವ ಕ್ರೂರ ಹಿಂಸೆಯ ಮೂಲವನ್ನು ವಸಾಹತುಶಾಹಿ ಶಾಸನದಲ್ಲಿ ಕಾಣಬಹುದಾಗಿದೆ. ಸಿದ್ಧಾಂತದಲ್ಲಿ ಈ ಕಾಯ್ದೆಯನ್ನು ಕಿತ್ತು ಹಾಕಲಾಗಿದ್ದರೂ ಕ್ರಿಯೆಯಲ್ಲಿ ಅದಿನ್ನು ಭಾರತೀಯ ಕಾನೂನಿನ ಜೀವಂತ ಸಂಸ್ಕೃತಿಯ ಭಾಗವಾಗಿದೆ.

### 4.2.2 ಭಾರತೀಯ ದಂಡ ಸಂಹಿತೆಯ ಸೆಕ್ಷನ್ 377

1860ರ ಸಂಹಿತೆಯ ಸೆಕ್ಷನ್ 377ನ್ನು ಸಿದ್ಧಪಡಿಸಿದವನು ಲಾರ್ಡ್ ಮೆಕಾಲೆ. ಇದು 'ಮನುಷ್ಯ ದೇಹದ ಮೇಲೆ ಪರಿಣಾಮ ಬೀರುವ ಅಪರಾಧಗಳು' ಎಂಬ ತಲೆಬರಹದ ಸೆಕ್ಷನ್ ಅಡಿಯಲ್ಲಿ ಬರುತ್ತದೆ. ಮತ್ತು ಅತ್ಯಾಚಾರದ ಅಪರಾಧ ಕುರಿತ ಸೆಕ್ಷನ್ ಅನ್ನು ಅನುಸರಿಸುತ್ತದೆ. ಸೆಕ್ಷನ್ 377ರಲ್ಲಿ ವಿವರಿಸಲಾಗಿರುವ ಅಪರಾಧವು ಯಾವ ರೀತಿ ಮನುಷ್ಯ ದೇಹದ ಮೇಲೆ ಅಪರಾಧ ಮಾಡಿದಂತಾಗುತ್ತದೆ ಎಂಬುದನ್ನು ಸ್ಪಷ್ಟಪಡಿಸಿಲ್ಲ. ಇದರ ನ್ಯಾಯಶಾಸ್ತ್ರೀಯ ಆಧಾರವು ನಿಜವಾಗಿಯೂ ನಿಂತಿರುವುದು ಲಿಂಗ ಮತ್ತು ಲೈಂಗಿಕತೆ ನಿರ್ದಿಷ್ಟತೆ ಕುರಿತ ನಿರ್ದಿಷ್ಟ ನೈತಿಕತೆಯ ಕಲ್ಪನೆ ಮತ್ತು ಆ ನೈತಿಕತೆಯನ್ನು ಭಾರತೀಯ ಪ್ರಜೆಗಳ ಮೇಲೆ ಹೇರುವ ಅಗತ್ಯದ ಮೇಲೆ

**ಬಾ.ದಂ.ಸಂ.ಯ ಸೆಕ್ಷನ್ 377ರ ವಿವರಣೆ**

**ಅಸಹಜ ಅಪರಾಧಗಳು** –ಯಾವುದೇ ವ್ಯಕ್ತಿಯು ಪ್ರಕೃತಿ ನಿಯಮಕ್ಕೆ ವಿರುದ್ಧವಾಗಿ ಸ್ವ-ಇಚ್ಛೆಯಿಂದ ಯಾವುದೇ ಹೆಂಗಸು ಅಥವ ಪ್ರಾಣಿಯೊಂದಿಗೆ ಲೈಂಗಿಕ ಸಂಭೋಗ ಹೊಂದಿದಲ್ಲಿ ಜೀವಾವಧಿ ಜೈಲು ಶಿಕ್ಷೆ ಅಥವ 10 ವರ್ಷಗಳಿಗೆ ವಿಸ್ತರಿಸಬಹುದಾದ ಜೈಲುಶಿಕ್ಷೆ ನೀಡತಕ್ಕದ್ದು ಮತ್ತು ದಂಡವನ್ನು ವಿಧಿಸಬಹುದು.

ವಿವರಣೆ - ಈ ಸೆಕ್ಷನ್‌ನಲ್ಲಿ ಅಪರಾಧವೆಂದು ಪರಿಗಣಿಸಲಾದ ಲೈಂಗಿಕ ಸಂಭೋಗಕ್ಕೆ ಪ್ರವೇಶಿಸುವಿಕೆಯಷ್ಟೇ ಸಾಕು.

ಈ ವ್ಯವಸ್ಥೆಯು ಅಸಹಜವೆಂದು ಭಾವಿಸುವ ಕೆಲವು ವಿಧದ ಲೈಂಗಿಕ ಕ್ರಿಯೆಗಳ ಮೇಲೆ ಕ್ರಮ ಜರುಗಿಸಲು ಅವಕಾಶ ಮಾಡಿಕೊಡುತ್ತದೆ. ಇಲ್ಲಿ ಗಮನಿಸಬೇಕಾದ ಮುಖ್ಯ ಅಂಶವೆಂದರೆ ಸಮ್ಮತಿ ಇರಲಿ ಇಲ್ಲದಿರಲಿ, ಪ್ರಕೃತಿ ನಿಯಮಕ್ಕೆ ವಿರುದ್ಧವಾಗಿ ಗಂಡಸು, ಹೆಂಗಸು ಅಥವ ಪ್ರಾಣಿಯೊಂದಿಗೆ ಲೈಂಗಿಕ ಸಂಭೋಗವೆನಿಸಿಕೊಳ್ಳುವ, ಪ್ರವೇಶಿಸುವಿಕೆಯ ಅಗತ್ಯವನ್ನು ಪೂರೈಸುವ ಲೈಂಗಿಕ ಕ್ರಿಯೆಗಳು ಕ್ರಮ ಜರುಗಿಸಲು ಅರ್ಹವಾದವೆಂಬುದು. ಸೆಕ್ಷನ್ 377ರ ಸ್ವರೂಪ ಮತ್ತು ವ್ಯಾಪ್ತಿಯನ್ನು ಅರ್ಥ ಮಾಡಿಕೊಳ್ಳಲು ಈ ಸೆಕ್ಷನ್ ಅಡಿಯಲ್ಲಿ ತೆಗೆದುಕೊಂಡ ನ್ಯಾಯಿಕ ನಿರ್ಧಾರಗಳನ್ನು ಅಧ್ಯಯನ ಮಾಡಬೇಕಾಗುತ್ತದೆ. ಪ್ರಕೃತಿ ನಿಯಮಕ್ಕೆ ವಿರುದ್ಧವಾದ ಲೈಂಗಿಕ ಸಂಭೋಗವೆಂಬ ಕಲ್ಪನೆಯು ಮುಖ ಮೈಥುನ, ಗುದ ಮೈಥುನ ಮತ್ತು ತೊಡೆ ಮೈಥುನವನ್ನು ಒಳಗೊಂಡಿದ್ದು, ಪ್ರವೇಶಿಸುವಿಕೆಯ ಅರ್ಥವನ್ನು ಯೋನಿ-ಗುದ ಪ್ರವೇಶಿಸುವಿಕೆಯಾಚೆಗೂ ವಿಸ್ತರಿಸಿದೆ ಎಂಬುದನ್ನು ವಿಶ್ಲೇಷಣೆಯೊಂದು ಪ್ರಕಟಗೊಳಿಸಿದೆ. ಮೂಲಭೂತವಾಗಿ ಸಂತಾನೋತ್ಪತ್ತಿಗೆ ಕಾರಣವಾಗದ ಯಾವುದೇ ವಿಧವಾದ ಲೈಂಗಿಕ ಕ್ರಿಯೆಯು ಈ ಸೆಕ್ಷನ್ ಅಡಿಯಲ್ಲಿ ಪ್ರಾಮುಖ್ಯತೆ ಪಡೆದುಕೊಂಡಿದೆ.

ಕ್ರಿಯೆಗಳನ್ನು ಎಲ್ಲ ಮಾನವ ಜೀವಿಗಳು ತೊಡಗಿರುವಂತಹ ಕ್ರಿಯೆಗಳೆಂದು ಪರಿಗಣಿಸಿದ್ದರೆ, ಹಿಜ್ರಾ ಮತ್ತು ಕೋಥಿಗಳ ಸಂದರ್ಭದಲ್ಲಿ ಸೆಕ್ಷನ್ 377 ಅಪಾಯಕಾರಿ ವ್ಯವಸ್ಥೆಯಾಗಿ ಪರಿಣಮಿಸುತ್ತಿರಲಿಲ್ಲ. ಸಲಿಂಗ ಪೂರ್ವಾಗ್ರಹ ವ್ಯಾಖ್ಯಾನದ ಸ್ವರೂಪದಿಂದಾಗಿ ಈ ಕ್ರಿಯೆಗಳು ಕ್ವಿಯರ್ ಜನರ ದೇಹಗಳಲ್ಲಿ ನಿರ್ದಿಷ್ಟವಾಗಿ ಸ್ಥಾಪಿತಗೊಂಡಿವೆ. ಸಲಿಂಗಕಾಮಿ ಅಥವ ಹಿಜ್ರಾ ಆಗುವುದೆಂದರೆ ಪ್ರಕೃತಿ ನಿಯಮಕ್ಕೆ ವಿರುದ್ಧವಾಗಿ ಲೈಂಗಿಕ ಸಂಭೋಗದಲ್ಲಿ ತೊಡಗಿರುವ ಹಿಜ್ರಾ ಅಥವ ಸಲಿಂಗಕಾಮಿ ಎಂಬ ಭಾವನೆಗೆ ಬರುವುದಾಗಿದೆ.

ಸೆಕ್ಷನ್ 377ರ ಈ ವಿಶೇಷ ವಿವರಣೆಯ ಅರ್ಥವೇನೆಂದರೆ, ಎಲ್ಲ ಕ್ವಿಯರ್ ಜನರು ವಿಶೇಷವಾಗಿ ಕೋಥಿ ಮತ್ತು ಹಿಜ್ರಾ ಲೈಂಗಿಕ ಕಾರ್ಮಿಕರು ಈ ವ್ಯವಸ್ಥೆಯಿಂದಾಗಿ ಹಿಂಸೆಗೆ ಈಡಾಗುತ್ತಾರೆ. ಸ್ಥಳಾವಕಾಶದ ಲಭ್ಯತೆಯ ದೃಷ್ಟಿಯಿಂದ ನೋಡಿದಾಗ ಸೆಕ್ಷನ್ 377ರಲ್ಲಿ ಸೂಚಿಸಿರುವ ಸಾರ್ವಜನಿಕ ಸ್ಥಳಗಳಾದ ಪಾರ್ಕುಗಳು ಮತ್ತು ಸಾರ್ವಜನಿಕ ಶೌಚಾಲಯಗಳಲ್ಲಿ ಲೈಂಗಿಕ ಕ್ರಿಯೆಯಲ್ಲಿ ತೊಡಗುವವರು ಈ ಕಡೆಗಣಿಸಲ್ಪಟ್ಟ ಜನಸಂಖ್ಯೆಯೆ. ಹಾಗಾಗಿ ಬಂಧನಕ್ಕೆ ಹೆಚ್ಚು ಈಡಾಗುವವರು ಅವರೇ.

ಕ್ವೀನ್ ಎಂಪ್ರೆಸ್ V/S ಕೈರತಿ ( ILR6 A11 205 ) ಕೇಸಿನಲ್ಲಿ ಪೋಲೀಸರು ಸಿಕ್ಕಿಬಿದ್ದ ವ್ಯಕ್ತಿಯನ್ನು ಮಹಿಳೆಯ ಉಡುಪು ತೊಟ್ಟ ಹಿಜ್ರಾ ಎಂದು ಅನುಮಾನ ಪಟ್ಟರು. ಮಹಿಳೆಯರೊಂದಿಗೆ ಹಾಡುತ್ತಿದ್ದ, ಕುಣಿಯುತ್ತಿದ್ದ ಸಂದರ್ಭವು ಇತ್ತು. ಹಾಗಾಗಿ ಆತನನ್ನು ಸೆಕ್ಷನ್ 377ರನ್ವಯ ಬಂಧಿಸಲಾಯಿತು. ಕೋರ್ಟಿನ ವಿಚಾರಣೆಯಲ್ಲಿ ಆರೋಪಿಯು ಪುರುಷ ಸಲಿಂಗ ಕಾಮಿಯೆಂದು ತಿಳಿಯಿತು. ಇದು ಗೊತ್ತಾಗಿದ್ದು ಆತನ ಗುದ ರಂಧ್ರ ವಿರೂಪಗೊಂಡಿರುವುದನ್ನು ಮತ್ತು ಆತನ ಹೆಣ್ಣುತನದ ವರ್ತನೆಯನ್ನು ಹೇಳುವ ವೈದ್ಯಕೀಯ ವರದಿಗಳಿಂದ. ಕೋರ್ಟು ಆತನನ್ನು ಖುಲಾಸೆಗೊಳಿಸಿತು. ಆಕೆಯ ಲಿಂಗ ಅನಿರ್ದಿಷ್ಟ ವರ್ತನೆ ಮತ್ತು ಅಸ್ಮಿತೆಯನ್ನಾಧರಿಸಿ ಇಡೀ ತನಿಖೆ ಮತ್ತು ಅಧಿವಿಚಾರಣೆಯ ಪ್ರಕ್ರಿಯೆಯು ಆಕ್ರಮಣಕಾರಿಯಾಗಿ ಕೈರತಿಯನ್ನು ಕಳಂಕಿತಳನ್ನಾಗಿಸಿತು.

ಸೆಕ್ಷನ್ 377ರ ಬಳಕೆಯು ಸಂಪೂರ್ಣವಾಗಿ ದಾಖಲಾಗಿಲ್ಲ. ಆಗಿದ್ದರೆ ಟ್ರಯಲ್ ಕೋರ್ಟನ್ನೂ ತಲುಪದ ಅನೇಕ ಕೇಸುಗಳಲ್ಲಿ ಬಳಸಿಕೊಳ್ಳಬಹುದಾಗಿತ್ತು. ಪೋಲೀಸ್ ಠಾಣೆಯ ಮಟ್ಟದಲ್ಲಿ ನಿರ್ಧಾರವಾಗಿ ಬಿಡುತ್ತದೆ ಎಂಬುದರಿಂದ ಹಿಡಿದು, ಮನವಿಯನ್ನೇ ಮಾಡಿಕೊಂಡಿಲ್ಲ ಎಂಬುವವರೆಗಿನ ಹಲವಾರು ಕಾರಣಗಳಿಂದಾಗಿ ಕೇಸುಗಳು ಟ್ರಯಲ್ ಕೋರ್ಟನ್ನೂ ತಲುಪಿರುವುದಿಲ್ಲ. ಹಾಗಾಗಿ ಕೆಲವೇ ಕೆಲವು ಕೇಸುಗಳು ಅಂತಿಮವಾಗಿ ಹೈಕೋರ್ಟು ಮತ್ತು ಸುಪ್ರೀಂಕೋರ್ಟ್‌ನ್ನು ತಲುಪುತ್ತವೆ. ಮುಖ್ಯವಾಗಿ ಗಮನಿಸಬೇಕಾದ ಅಂಶವೆಂದರೆ ಮಕ್ಕಳ ಲೈಂಗಿಕ ದುರುಪಯೋಗವನ್ನು ವಿಶೇಷವಾಗಿ ಅಪರಾಧೀಕರಣಗೊಳಿಸಿರುವ ಭಾರತೀಯ ಕಾನೂನುಗಳು ಇಲ್ಲ. ಹಾಗಾಗಿ 377ನ್ನು ಮಕ್ಕಳೊಂದಿಗಿನ ಗುದ ಅಥವ ಮುಖ ಸಂಭೋಗದ ಕೇಸುಗಳಲ್ಲಿ ಬಳಸಿಕೊಳ್ಳಲಾಗಿದೆ. ಸೆಕ್ಷನ್ 377ರ ಅಡಿ 46 ತೀರ್ಪುಗಳ ಕುರಿತು ನಡೆದಿರುವ ಅಧ್ಯಯನದಲ್ಲಿ ಮೂವತ್ತು ಕೇಸುಗಳು ( ಶೇ 60ಕ್ಕಿಂತ ಹೆಚ್ಚು) ಮಕ್ಕಳ ಲೈಂಗಿಕ ದುರುಪಯೋಗಕ್ಕೆ ಸಂಬಂಧಿಸಿದವು ಎಂಬುದು ಬೆಳಕಿಗೆ ಬಂದಿದೆ.

ಇವುಗಳಲ್ಲಿ ಗಂಡಸಿನಿಂದ ಗಂಡು ಮಗುವಿನ ಲೈಂಗಿಕ ದುರುಪಯೋಗವಾಗಿರುವ 20 ಪ್ರಕರಣಗಳಿದ್ದರೆ, ಗಂಡಸಿನಿಂದ ಹೆಣ್ಣು ಮಗುವಿನ ಲೈಂಗಿಕ ದುರುಪಯೋಗವಾಗಿರುವ 10 ಪ್ರಕರಣಗಳಿವೆ. (ನೋಡಿ Humjinsi, 2002, P 71) ಮಕ್ಕಳ ಲೈಂಗಿಕ ದುರುಪಯೋಗದೊಂದಿಗೆ ವ್ಯವಹರಿಸಲು ಸೆಕ್ಷನ್ 377ರ ಬಳಕೆ ಬಗ್ಗೆ ಗಂಭೀರ ಮಿತಿಗಳಿವೆ. ಸೆಕ್ಷನ್ 377ರಲ್ಲಿ ಹೆಚ್ಚಿನ ಒತ್ತು ನೀಡಿರುವುದು ಪ್ರಕೃತಿ ನಿಯಮಕ್ಕೆ ವಿರುದ್ಧವಾದ ಲೈಂಗಿಕ ಸಂಭೋಗಕ್ಕೆ. ಮಕ್ಕಳ ಲೈಂಗಿಕ ದುರುಪಯೋಗದಲ್ಲಿ ಪ್ರವೇಶಿಸುವಿಕೆ ಸಂಭವಿಸುವುದಿಲ್ಲ, ಮಾನವಹಕ್ಕುಗಳ ದುರುಪಯೋಗವಾಗಿ ಮಕ್ಕಳ ಲೈಂಗಿಕ ದುರುಪಯೋಗವನ್ನು ಸೆಕ್ಷನ್ 377 ವಿಧಿಸಿರುವ ಮಿತಿಯೊಳಗೆ ತರಲಾಗುವುದಿಲ್ಲ. ಇದಕ್ಕೆ ಬೇರೆಯದೇ ಆದ ಕಾನೂನಿನ ಅಗತ್ಯವಿದೆ. ಈ ಕಾನೂನು, ದುರುಪಯೋಗದ ಸಾಧ್ಯತೆಗಳ ಅಧಿಕಾರಸ್ಥಾನ ಕೇಂದ್ರಿತವಾಗಿರುವುದು ಮನೆಯಲ್ಲಿ ಅಥವ ಶಾಲೆಯಲ್ಲಿ ಎಂದು ಪರಿಗಣಿಸಬೇಕಾಗುತ್ತದೆ. ಮಕ್ಕಳ ಲೈಂಗಿಕ ದುರುಪಯೋಗವನ್ನು ಏಕ ಕ್ರಿಯೆಗೆ ವಿರುದ್ಧವಾಗಿ, ಅಧಿಕಾರದ ನಿರಂತರ ದುರುಪಯೋಗವಾಗಿಯೂ ಪರಿಗಣಿಸಬೇಕಾಗುತ್ತದೆ. ಮತ್ತು ಅಂತಿಮವಾಗಿ ಪ್ರವೇಶಿಸುವಿಕೆ ಕುರಿತ ನ್ಯಾಯಿಕ ವಿವರಣೆಯಿಂದ ಆಚೆ ಹೋಗಿ, ಲೈಂಗಿಕ ಕೃಪೆಗಳಿಗಾಗಿ ಸಂಬಂಧಗಳ ನಂಬಿಕೆ ಮತ್ತು ಅಧಿಕಾರದ ದುರುಪಯೋಗವಾಗಿ ಹೆಚ್ಚು ಸೂಕ್ಷ್ಮವಾಗಿ ಗಮನಿಸಬೇಕಾಗುತ್ತದೆ. ಮಕ್ಕಳನ್ನು ಲೈಂಗಿಕ ದುರುಪಯೋಗದಿಂದ ರಕ್ಷಿಸಲು ವೈಯಕ್ತಿಕ ಸ್ವಾತಂತ್ರ್ಯವನ್ನು ಅತಿಕ್ರಮಿಸುವ ವಸಾಹತುಶಾಹಿ ಕಾನೂನಿನ ಬಳಕೆಯನ್ನು ಗಂಭೀರವಾಗಿ ಪ್ರಶ್ನಿಸುವ ಅಗತ್ಯವಿದೆ.

ಸೆಕ್ಷನ್ 377ನ್ನು ಸಮ್ಮತಿ ಇರುವ ಲೈಂಗಿಕ ಕ್ರಿಯೆಗಳ ಪ್ರಕರಣಗಳಲ್ಲಿ ವ್ಯಾಪಕವಾಗಿ ಬಳಸಿಲ್ಲ ಎಂಬುದು ಕೇಸಿನಲ್ಲಿ ಸೂಚಿತವಾಗಿದೆ. ಹಾಗಾದರೂ ಇದು ಕ್ವಿಯರ್ ಜನರ ಕುರಿತ ಕೆಲ ವಿಧದ ವ್ಯಾಖ್ಯಾನವನ್ನು ಪ್ರಚಲಿತಗೊಳಿಸುವಲ್ಲಿ ವಹಿಸಿದ ಪ್ರಮುಖ ಪಾತ್ರಕ್ಕೆ ಮಿತಿಯೊಡ್ಡುವುದಿಲ್ಲ. ಈ ವ್ಯಾಖ್ಯಾನವು ಕೆಲವು ಸಾಮಾಜಿಕ ಗುಂಪುಗಳನ್ನು ಅಪರಾಧಿಗಳೆಂದು ವಿಂಗಡಿಸಿತು ಮತ್ತು ಅವರ ಲೈಂಗಿಕ ವರ್ತನೆಗಳನ್ನು ಕಳಂಕಿತಗೊಳಿಸಿತು. ಈ ಸೆಕ್ಷನ್ ಕುರಿತ ಒಂದು ವಿವರಣೆಯು ಹೆಣ್ಣು ಸಲಿಂಗಕಾಮಿಗಳನ್ನು ಹೊರತು ಪಡಿಸುತ್ತದೆ. ಹೊರತುಪಡಿಸುವುದಕ್ಕೆ ಸಮರ್ಥನೆ ಎಂದರೆ ಅಪರಾಧ ಜರುಗಲು ಅಗತ್ಯವಾದ ತಕ್ಕಷ್ಟು ಪ್ರವೇಶಿಸುವಿಕೆ ಎಂಬ ವಿವರಣೆ. ಆದರೆ ರಾಜ್ಯಾಧಿಕಾರವು ಹೆಣ್ಣು ಸಲಿಂಗಕಾಮಿಗಳಿಗೆ ಕಿರುಕುಳ ಕೊಡಲು ಸಹ ಈ ಸೆಕ್ಷನ್ ಅನ್ನು ವ್ಯಾಪಕವಾಗಿ

ಬಳಸಿಕೊಂಡಿದೆ ಎಂಬುದು ತಿಳಿದು ಬಂದಿದೆ. ಆದ್ದರಿಂದ ಕ್ವಿಯರ್ ಜನರನ್ನು ಅಸಹಜ ಮತ್ತು ವಿಕೃತವೆಂದು ಸೃಷ್ಟಿಸಿದ ವ್ಯಾಖ್ಯಾನವು ಎಲ್ಲ ಕ್ವಿಯರ್ ಜನರ ಮೇಲಿನ ಹಿಂಸೆಯನ್ನು ಅಧಿಕೃತಗೊಳಿಸುವ ಪರಿಣಾಮವನ್ನು ಹೊಂದಿದೆ ಎಂಬುದು ತಿಳಿಯುತ್ತದೆ. ಈ ಕಾನೂನು ಕ್ವಿಯರ್ ಜನರ ಹಕ್ಕುಗಳನ್ನು ಕುರಿತು ಮಾತನಾಡುವುದಕ್ಕ ಬಾಯಿ ಮುಚ್ಚಿಸುವಂತಹ ಪರಿಣಾಮವನ್ನು ಹೊಂದಿದೆ. ಕಾರಣ ಸಲಿಂಗಕಾಮದ ಅಪರಾಧೀಯತೆಯನ್ನಾಧರಿಸಿಯೇ ಕ್ವಿಯರ್ ಜನರ ಮೇಲಿನ ತಾರತಮ್ಯವನ್ನು ಅಧಿಕೃತಗೊಳಿಸಲಾಗಿದೆ ಎಂಬುದನ್ನೇ ಕಾನೂನು ಅವಲಂಬಿಸಿರುವುದು.

### 4.2.3 ಇಮ್ಮಾರಲ್ ಟ್ರಾಫಿಕಿಂಗ್ ಪ್ರಿವೆನ್‌ಶನ್ ಕಾಯ್ದೆ 1986

ವೇಶ್ಯೆಯರನ್ನು ನಿಯಂತ್ರಿಸಲು ಭಾರತೀಯ ರಾಜ್ಯಾಧಿಕಾರಕ್ಕೆ ಇರುವ ಮುಖ್ಯ ಸಾಧನವೆಂದರೆ ಐ.ಟಿ.ಪಿ.ಎ ಕಾಯ್ದೆ 1956 (1986 ರಲ್ಲಿ ತಿದ್ದುಪಡಿ ತರಲಾಯಿತು) ಈ ಕಾಯ್ದೆಯ ಆಜ್ಞೆ ಏನೆಂದರೆ ವೇಶ್ಯಾವಾಟಿಕೆಗಾಗಿ ಮಹಿಳೆ ಮತ್ತು ಮಕ್ಕಳ ಸಾಗಣೆಯನ್ನು ತಡೆಯುವುದು. 1956ರ ಮೂಲ ಕಾಯ್ದೆ ಸೆಕ್ಷನ್ 5 (f) ಪ್ರಕಾರ 'ಹೆಂಗಸೊಬ್ಬಳು ತನ್ನ ಮೈಯನ್ನು ಅವ್ಯವಸ್ಥಿತ ಲೈಂಗಿಕ ಸಂಭೋಗಕ್ಕಾಗಿ, ಹಣ ಅಥವ ಸೇವೆಗೆ ಬಾಡಿಗೆ ನೀಡಲು ಒಪ್ಪಿಸಿಕೊಳ್ಳುವ' ಸ್ವಇಚ್ಛಾ ಕ್ರಿಯೆಯು ಕ್ರಮ ಜರುಗಿಸಲು ಅರ್ಹವಾದುದು. 1986ರಲ್ಲಿ ತಿದ್ದುಪಡಿಯಾದ ಕಾಯ್ದೆಯ ಸೆಕ್ಷನ್ 5 (f) ಅಡಿಯಲ್ಲಿ ಕೇಂದ್ರಿತವಾದ ವಿಷಯವು ಸ್ವಇಚ್ಛೆಯಿಂದ ಕೈಗೊಂಡ ವಾಣಿಜ್ಯ ಲೈಂಗಿಕ ಚಟುವಟಿಕೆಯಿಂದ ವ್ಯಕ್ತಿಗಳ ಲೈಂಗಿಕ ಶೋಷಣೆ ಅಥವ ದುರುಪಯೋಗಕ್ಕೆ ಬದಲಾಗಿದೆ. ಸಾಗಣೆ ಕುರಿತ ಈ ಕಾನೂನಿನ ಉದ್ದೇಶವು ವೈಶ್ಯಾವಾಟಿಕೆಯುನ್ನು ಅಪರಾಧಿಕರಣಗೊಳಿಸುವುದಕ್ಕಿಂತ ವೈಶ್ಯಾಗೃಹ ನಡೆಸುವುದನ್ನು, ಸಾಗಣೆ, ತಲೆ ಹಿಡುಕತನ ಮತ್ತು ಕೇಳಿಕೊಳ್ಳುವುದನ್ನು ಅಪರಾಧಿಕರಣಗೊಳಿಸವುದಾಗಿದೆ. ನಿಜಾರ್ಥದಲ್ಲಿ ITPA ಕಾನೂನು, ಗುರಿಯಾಗಿಸುವುದು ಕಣ್ಣಿಗೆ ಗೋಚರಿಸುವ ಲೈಂಗಿಕ ಕಾರ್ಮಿಕರನ್ನು (ಇವರು ಸರಪಳಿಯಲ್ಲಿ ಅತ್ಯಂತ ಕೃಶವಾದ ಕೊಂಡಿಗಳು) ಕೈ ಬಿಡುವುದು ಲೈಂಗಿಕ ಚಟುವಟಿಕೆಯ ಸಂಸ್ಥೆಯನ್ನು ಬೆಂಬಲಿಸುವ ಮರೆಯಲ್ಲಿರುವ ಪ್ರಬಲವಾದ ವ್ಯವಸ್ಥೆಯನ್ನು. ಹಾಗಾಗಿ ಕಾರ್ಯರೂಪದಲ್ಲಿರುವ ITPA ಕಾನೂನಿನ ಸೆಕ್ಷನ್‌ಗಳೆಂದರೆ 7 ಮತ್ತು 8. ಈ ಸೆಕ್ಷನ್‌ಗಳು ಸಾರ್ವಜನಿಕ ಸ್ಥಳಗಳಲ್ಲಿ ನಡೆಯುವ ವೇಶ್ಯಾವಾಟಿಕೆ ಮತ್ತು ಕೇಳಿಕೊಳ್ಳುವುದಕ್ಕೆ ಸಂಬಂಧ ಪಟ್ಟಿವೆ. ಬಹಳಷ್ಟು ಲೈಂಗಿಕ ಕಾರ್ಮಿಕರ ಬಂಧನಗಳಾಗುವುದು ಸೆಕ್ಷನ್ 8 ರಡಿಯಲ್ಲಿ. ಈ ಸೆಕ್ಷನ್ ವೇಶ್ಯವಾಟಿಕೆಗಾಗಿ ಹೇಳಿಕೊಳ್ಳುವುದನ್ನು ಕುರಿತು ಹೇಳುತ್ತದೆ. ಈ ವಿವರಣೆಯು ಸ್ಪಷ್ಟಪಡಿಸುವುದೇನೆಂದರೆ – ಭಾರತೀಯ ಕಾನೂನಿನಡಿ ಲೈಂಗಿಕ ಕಾರ್ಮಿಕರು ಹೇಳುವ ಸಲುವಾಗಿ ಇದ್ದಾರೆ ಆದರೆ ಕಾಣುವುದಿಲ್ಲ; ಲೈಂಗಿಕ ದುಡಿಮೆಯನ್ನು 'ಅಗತ್ಯ ಪೀಡೆ' ಯಾಗಿರಲು ಅನುವು ಮಾಡಿಕೊಡಲಾಗಿದೆ. ಯಾಕೆಂದರೆ ಅದು ಗಂಡಸಿನ ಲೈಂಗಿಕ ಅಗತ್ಯವನ್ನು ಪೂರೈಸುತ್ತದೆ. ಆದರೆ ಅದರ ಆಚರಣೆಯು ನಿರಂತರವಾಗಿ ಕಾನೂನು ಸಮ್ಮತ ಆರೋಪಣೆಗಳು, ಪೋಲೀಸರ ಹಿಂಸೆ ಮತ್ತು ಬೆದರಿಕೆಯ ಬೇಲಿಯೊಳಗೆ ನಡೆಯಬೇಕು.

ಆಧುನಿಕ ಭಾರತೀಯ ಸಮಾಜದಲ್ಲಿ ರಾಜ್ಯಾಧಿಕಾರ ಮತ್ತು ಅದರ ಸಾಧನಗಳಾದ ಪೋಲೀಸರು, ನ್ಯಾಯಾಧೀಶರು, ಕಾನೂನು ಮಾಡುವವರು ಹಾಗೂ ಸಮಾಜ ಸುಧಾರಕರೂ ಸಹ ಒಂದೇ ಮನಸ್ಸಿನಿಂದ ಪ್ರಯತ್ನ ಪಟ್ಟಿರುವುದು ಲೈಂಗಿಕ ಸಾಗಣೆಯನ್ನು ನಿಲ್ಲಿಸಿ, ಲೈಂಗಿಕ ಕಾರ್ಮಿಕರನ್ನು ಸುಧಾರಿಸುವ ಬಗ್ಗೆ, ಆದರೆ ಈ ವಿಧಾನವು ಅವರ ಮೂಲಭೂತ ನಾಗರೀಕ, ಆರ್ಥಿಕ, ಸಾಮಾಜಿಕ

ಮತ್ತು ಲೈಂಗಿಕ ಹಕ್ಕುಗಳನ್ನು ಉಲ್ಲಂಘಿಸಿವೆ ಮತ್ತು ಅವರನ್ನು ವ್ಯವಸ್ಥಿತ ಹಿಂಸೆ, ಸಾರ್ವಜನಿಕ ಕಳಂಕ ಮತ್ತು ತಾರತಮ್ಯಕ್ಕೆ ಈಡು ಮಾಡಿದೆ.

ಇಲ್ಲಿಯವರೆಗೆ ITPA ಯನ್ನು ವೇಶ್ಯಾವಾಟಿಕೆಯಲ್ಲಿರುವ ಮಹಿಳೆಯರಿಗೆ ಅನ್ವಯಿಸಿ ವಿಶ್ಲೇಷಿಸಲಾಗಿದೆ. ಈ ವಿಶ್ಲೇಷಣೆಯು – ITPA ಗುರಿಯಾಗಿಸುವುದು ಮಹಿಳೆಯರನ್ನು ಎಂಬ ಕಲ್ಪನೆಯನ್ನಾಧರಿಸಿದೆ. 1956ರ ಮೂಲ ಕಾಯ್ದೆಯನ್ನು 'ಸಪ್ರೆಶನ್ ಇನ್ ಇಮ್ಮಾರಲ್ ಟ್ರಾಫಿಕಿಂಗ್ ಇನ್ ವಿಮೆನ್ ಅಂಡ್ ಗರ್ಲ್ಸ್ ಆಕ್ಟ್' (ಮಹಿಳೆ ಮತ್ತು ಹೆಣ್ಣು ಹುಡುಗಿಯರ ಅನೈತಿಕ ಸಾಗಣೆ ಅಡಗಿಸುವ ಕಾಯ್ದೆ) ಎಂದು ಹೆಸರಿಸಲಾಗಿತ್ತು. ಸೆಕ್ಷನ್ 2 (f) ವೇಶ್ಯಾವಾಟಿಕೆಯನ್ನು 'ಹೆಂಗಸೊಬ್ಬಳು ತನ್ನ ಮೈಯನ್ನು ಅವ್ಯವಸ್ಥಿತ ಲೈಂಗಿಕ ಸಂಭೋಗಕ್ಕಾಗಿ ಹಣ ಅಥವ ಸೇವೆಗೆ ಬಾಡಿಗೆ ನೀಡಲು ಒಪ್ಪಿಸಿಕೊಳ್ಳುವುದು' ಎಂದು ವಿವರಿಸಿದೆ. ಈ ಕಾಯ್ದೆಯು ತನ್ನೆಲ್ಲ ಅವಕಾಶಗಳೊಳಗೆ ವಿಶೇಷವಾಗಿ ಗುರಿಮಾಡಿದ್ದು ಸ್ತ್ರೀಲಿಂಗವನ್ನು. ಹಾಗಾದರೂ 1986ರ ತಿದ್ದುಪಡಿಯಲ್ಲಿ ಶಿರೋನಾಮೆಯನ್ನು 'ಇಮ್ಮಾರಲ್ ಟ್ರಾಫಿಕ್ ಪ್ರಿವೆನ್‌ಶನ್ ಆಕ್ಟ್' (ಅನೈತಿಕ ಸಾಗಣೆ ತಡೆ ಕಾಯ್ದೆ) ಆಗಿ ಪರಿವರ್ತಿಸಲಾಯಿತು. ಮತ್ತದು ಲಿಂಗ ನಿಷ್ಪಕ್ಷಪಾತವಾಯಿತು. ಹೆಣ್ಣು ಮತ್ತು ಹುಡುಗಿಯರು ಎಂಬ ಪದಗಳ ಬದಲಿಗೆ 'ವ್ಯಕ್ತಿ' ಎಂಬ ಪದವನ್ನು ಕಾಯ್ದೆಯುದ್ದಕ್ಕೂ ಸೆಕ್ಷನ್ (f) ಸೆಕ್ಷನ್ (AA) ಸೆಕ್ಷನ್ ( ca ) ಸೆಕ್ಷನ್ ( cb)ನಲ್ಲಿ ಬಳಸಲಾಗಿದೆ. ಆದರೂ ಕಾನೂನಿನಲ್ಲಿ ಆದ ಬದಲಾವಣೆಯು ವಾಸ್ತವ ಪರಿಸ್ಥಿತಿಯಲ್ಲಿ ಯಾವ ಬದಲಾವಣೆಯನ್ನು ತಂದಿಲ್ಲ. ಕಾರಣ ಕೋಥಿ ಲೈಂಗಿಕ ಕಾರ್ಮಿಕರನ್ನು ITPA ಕಾಯ್ದೆಯಡಿ ಬಂಧಿಸಿರುವುದು ಅತಿ ವಿರಳ ಆದರೆ ಅವರನ್ನು ಭಾರತೀಯ ದಂಡ ಸಂಹಿತೆಯ ಕಳ್ಳತನ ಮತ್ತು ಸುಲಿಗೆಗೆ ಸಂಬಂಧಿಸಿದ ಸೆಕ್ಷನ್‌ಗಳಡಿ ಕೊಂಡೊಯ್ಯುವುದೇ ಹೆಚ್ಚು.

ಈ ಕಾಯ್ದೆಯ ಪರಿಧಿಯು ಪುರುಷ ಮತ್ತು ಮಹಿಳಾ ಲೈಂಗಿಕ ಕಾರ್ಮಿಕರನ್ನು ಮತ್ತು ಬಹುಶಃ ಲಿಂಗ ಅಸ್ಮಿತೆ ಸ್ಪಷ್ಟವಾಗಿಲ್ಲದವರನ್ನೂ ಸಹ ಒಳಗೊಂಡಿದೆ. 1986ರ ತಿದ್ದುಪಡಿ ನಂತರವೇ ಪುರುಷ ಮತ್ತು ಹಿಜ್ರಾ ಲೈಂಗಿಕ ಕಾರ್ಮಿಕರು ITPAಯ ಅಪರಾಧ ವಿಷಯಗಳಾಗಿದ್ದು, ಇದು ಟ್ರಾನ್ಸ್‌ಜೆಂಡರ್ ಲೈಂಗಿಕ ಕಾರ್ಮಿಕರ ಬಂಧನ ಮತ್ತು ಬೆದರಿಕೆಗೆ ಕಾನೂನು ಸಮ್ಮತಿಯ ಆಧಾರ ಒದಗಿಸಿತು.

ಈ ರೀತಿ ITPA ಅಡಿಯಲ್ಲಿ ಪುರುಷ, ಮಹಿಳಾ ಮತ್ತು ಹಿಜ್ರಾ ಲೈಂಗಿಕ ಕಾರ್ಮಿಕರೆಲ್ಲರೂ ರಾಜ್ಯಾಧಿಕಾರದ ಹಿಂಸೆಯನ್ನು, ಸಾರ್ವಜನಿಕ ಕಳಂಕ ಮತ್ತು ತಾರತಮ್ಯವನ್ನು ಎದುರಿಸುತ್ತಾರೆ. ಅನೈತಿಕ ಸಾಗಣೆಯನ್ನು ತಡೆಯಬೇಕು ಮತ್ತು ಸಾರ್ವಜನಿಕ ಸುವ್ಯವಸ್ಥೆ ಮತ್ತು ಮರ್ಯಾದೆಯನ್ನು ರಕ್ಷಿಸಬೇಕು ಎಂಬ ಆಧಾರದ ಮೇಲೆ ಪೋಲೀಸರು ವೇಶ್ಯಾಗೃಹ ನಡೆಸುವವರು ಮತ್ತು ಗಿರಾಕಿಗಳನ್ನೊಳಗೊಂಡ ವೇಶ್ಯಾವಾಟಿಕೆ ಸಂಸ್ಥೆಯ ಬದಲಿಗೆ ಹೆಚ್ಚು ಗುರಿಯಾಗಿಸುವುದು ವೇಶ್ಯಾವಾಟಿಕೆಯಲ್ಲಿರುವ ಜನರನ್ನು.

ಪೋಲೀಸರು ಸಾಮಾನ್ಯವಾಗಿ ಲೈಂಗಿಕ ಕಾರ್ಮಿಕರ ವಿರುದ್ಧ, 'ಕೇಳಿಕೊಂಡಿರುವುದಕ್ಕೆ' ಸಾಕ್ಷ್ಯವೇ ( ITPA ಸೆಕ್ಷನ್ 8ರ ಪ್ರಕಾರ ವೇಶ್ಯಾವಾಟಿಕೆಗಾಗಿ ಕೇಳಿಕೊಂಡಿರುವುದಕ್ಕೆ ಸಾಕ್ಷಿ ಇರಬೇಕು) ಇಲ್ಲದೆ ಅವರು ವೇಶ್ಯೆಯರಿರಬೇಕು ಎಂಬ ಅನುಮಾನದ ಮೇಲೆ ಕ್ರಮ ಜರುಗಿಸುತ್ತಾರೆ. ಇದು ಖಾಯಂ ಆಗಿ ಗುರಿಯಾಗಿಸುವ ಜನರ ವರ್ಗವನ್ನು ಸೃಷ್ಟಿಸುತ್ತವೆ. ಅವರು ಯಾವುದೇ ಹೊತ್ತಿನಲ್ಲಿ, ಅಲ್ಲಿದ್ದರೆಂಬ ಕಾರಣಕ್ಕಾಗಿ ಸಾರ್ವಜನಿಕವಾಗಿ ಥಳಿಸಿಕೊಳ್ಳಲು ಅರ್ಹರಾಗುತ್ತಾರೆ. ಪೋಲೀಸ್ ಠಾಣೆಗೆ ಕೊಂಡೊಯ್ಯಲ್ಪಟ್ಟು ತಪ್ಪಾಗಿ ಬಂಧನಕ್ಕೊಳಗಾಗುತ್ತಾರೆ ಮತ್ತು

ನಿಗ್ರಹಕ್ಕೊಳಪಡುತ್ತಾರೆ. ಅವರನ್ನು ಅವಮಾನಕರವಾಗಿ ನಡೆಸಿಕೊಳ್ಳಲಾಗುತ್ತದೆ. ಅವರ ಸಂಪಾದನೆಯನ್ನು ಕಿತ್ತುಕೊಳ್ಳಲಾಗುತ್ತದೆ. ಕೆಲವು ವೇಳೆ ಅವರ ಮೇಲೆ ಸುಳ್ಳು ಕೇಸುಗಳನ್ನು ದಾಖಲಿಸಲಾಗುತ್ತದೆ. ಆ ಮೂಲಕ ಇರುವ ಕೇಸನ್ನು 'ಪರಿಹರಿಸುವ' ಮತ್ತು ಲೈಂಗಿಕ ಕಾರ್ಮಿಕರನ್ನು ಬೀದಿಯಿಂದ ದೂರವಿಡುವ ಎರಡೂ ಉದ್ದೇಶಗಳನ್ನು ಪೂರೈಸಿಕೊಳ್ಳಲಾಗುತ್ತದೆ.

**4.2.4 ನಾಗರೀಕ ಕಾನೂನುಗಳು**

ಸಂವಿಧಾನದ ಪ್ರಕಾರ ಮೂಲಭೂತ ಹಕ್ಕುಗಳಡಿ ಲಭ್ಯವಿರುವ ಬಹುಪಾಲು ರಕ್ಷಣೆಗಳು ಎಲ್ಲ ವ್ಯಕ್ತಿಗಳಿಗೂ ಅನ್ವಯಿಸುತ್ತದೆ. ಕೆಲವು ಹಕ್ಕುಗಳು ಪ್ರಜೆಗಳಿಗಷ್ಟೇ ಸೀಮಿತವಾಗಿವೆ. ಇದರ ಹೊರತಾಗಿ ಸಂವಿಧಾನವು ಹಕ್ಕುಗಳನ್ನು ಹೊಂದಿರುವವರ ನಡುವೆ ಯಾವ ವ್ಯತ್ಯಾಸವನ್ನು ಮಾಡುವುದಿಲ್ಲ. ಹಾಗಾದರೂ ಈ ಕಾನೂನಾನುಸಾರವಾದ ನಿಲುವು ಮನುಷ್ಯರ ನಾಗರೀಕ ವರ್ತನೆಯನ್ನು ನಿಯಂತ್ರಿಸುವ ಕಾನೂನುಗಳಲ್ಲಿ ಪ್ರತಿಬಿಂಬಿತವಾಗಿಲ್ಲ.

ಇದು ಹೆಚ್ಚು ಸ್ಪಷ್ಟವಾಗುವುದು 'ಟ್ರಾನ್ಸ್‌ಜೆಂಡರ್ ಲೈಂಗಿಕ ಕಾರ್ಮಿಕರಂತಹ ಕಡೆಗಣಿಸಲ್ಪಟ್ಟ ಜನರೊಂದಿಗಿನ ವರ್ತನೆಯಲ್ಲಿ. ಯಾರೊಬ್ಬರು ಹಿಜ್ರಾ ಮತ್ತು ಕೋಥಿ ಸ್ಥಾನವನ್ನು ಪಡೆದು ಕೊಂಡಲ್ಲಿ ಲಿಂಗ ಅನಿರ್ಧಿಷ್ಟತೆಯು ವ್ಯತ್ಯಾಸವನ್ನುಂಟು ಮಾಡುತ್ತದೆ ಎಂಬುದು ಸ್ಪಷ್ಟವಾಗುತ್ತದೆ. ಈ ವ್ಯತ್ಯಾಸ ವ್ಯಕ್ತವಾಗುವುದು ಮೂಲಭೂತ ಹಕ್ಕುಗಳನ್ನು ಪಡೆದುಕೊಳ್ಳುವ ಸಾಮರ್ಥ್ಯದಲ್ಲಿ. ಇತರೆ ಸಂದರ್ಭಗಳಲ್ಲಿ ಈ ಹಕ್ಕುಗಳು ಎಲ್ಲ ಪ್ರಜೆಗಳಿಗೂ ಲಭ್ಯ.

ಅಧಿಕೃತ ದಾಖಲೆ ಪತ್ರಗಳು ನಾಗರೀಕ ವ್ಯಕ್ತಿತ್ವವನ್ನು ಒದಗಿಸುತ್ತದೆ. ಭಾರತೀಯ ರಾಜ್ಯಾಧಿಕಾರವು ಹಲವು ಸಾಧನಗಳ ಮೂಲಕ ನಾಗರೀಕ ವ್ಯಕ್ತಿತ್ವವನ್ನು ವಿವರಿಸುತ್ತದೆ. ಅವುಗಳಲ್ಲಿ ಲಿಂಗ ಆಧಾರಿತ ಅಸ್ಮಿತೆಯು ಪ್ರಮುಖವಾದ ಮತ್ತು ತಪ್ಪಿಸಲಾಗದ ವರ್ಗವಾಗಿದೆ. ಜನನ ಪ್ರಮಾಣಪತ್ರ, ಪಾಸ್‌ಪೋರ್ಟ್ ಅಥವ ರೇಷನ್‌ಕಾರ್ಡ್‌ನಂತಹ ಗುರುತಿನ ದಾಖಲೆಗಳು ನಾಗರೀಕ ಮತ್ತು ಅಧಿಕೃತ ಸಮಾಜದ ಹಲವಾರು ರೀತಿಯ ಸಂಬಂಧಗಳಲ್ಲಿ ತೊಡಗುವ ಸಾಮರ್ಥ್ಯಕ್ಕೆ ಅಗತ್ಯವಾಗಿವೆ. ಡ್ರೈವಿಂಗ್ ಲೈಸೆನ್ಸ್ ಪಡೆದುಕೊಳ್ಳಲು, ಕಾನೂನಿನ ಸೌಲಭ್ಯ ಪಡೆದುಕೊಳ್ಳಲು, ಉದ್ಯೋಗಾವಕಾಶಗಳನ್ನು ಪಡೆಯಲು, ವಿಶ್ವವಿದ್ಯಾಲಯಕ್ಕೆ ಪ್ರವೇಶ ಪಡೆಯಲು, ಆರೋಗ್ಯ ಸೇವೆಯನ್ನೊಳಗೊಂಡ ಅಗತ್ಯ ಸೌಲಭ್ಯಗಳನ್ನು ಪಡೆಯಲು ಗುರುತಿನ ದಾಖಲೆಗಳು ಅಗತ್ಯ.

ಪುರುಷ ಮತ್ತು ಮಹಿಳೆ ಎಂಬ ದ್ವಿ-ವಿಂಗಡಣೆಯೊಳಗೆ ಲಿಂಗವನ್ನಾಧರಿಸಿ ಗುರುತಿಸುವ ಕ್ರಮ ನಾಗರೀಕ ಅಸ್ಮಿತೆಗೆ ಅತ್ಯಂತ ಪ್ರಮುಖವಾದುದು. ಇದು ಭಾರತೀಯ ರಾಜ್ಯಾಧಿಕಾರದ ಅಗತ್ಯವೂ ಆಗಿದೆ. ಭಾರತೀಯ ರಾಜ್ಯಾಧಿಕಾರದ ನೀತಿಯು ಎರಡೇ ಲಿಂಗಗಳನ್ನು ಗುರುತಿಸುವುದು ಮತ್ತು ಹಿಜ್ರಾಗಳನ್ನು ಹೆಣ್ಣೆಂದೂ ಅಥವ ಮೂರನೆ ಲಿಂಗವೆಂದು (ಹಿಜ್ರಾಗೆ ಬೇಕಾದಲ್ಲ) ಗುರುತಿಸದಿರುವುದು ಅವರನ್ನು ಹಲವಾರು ಹಕ್ಕುಗಳಿಂದ ವಂಚಿಸಿದೆ; ಈ ಹಕ್ಕುಗಳು ಅನಾಯಾಸವಾಗಿ ಭಾರತೀಯ ಪ್ರಜೆಗಳಿಗೆ ದೊರುಕುವಂತಹವು. ಈ ಹಕ್ಕುಗಳು, ಮತ ಚಲಾಯಿಸುವ ಹಕ್ಕು, ಆಸ್ತಿ ಹೊಂದುವ ಹಕ್ಕು, ಮದುವೆಯಾಗುವ ಹಕ್ಕು, ಪಾಸ್‌ಪೋರ್ಟ್ ಮೂಲಕ ಅಧಿಕೃತ ಅಸ್ಮಿತೆಯನ್ನು ಹೊಂದುವ ಹಕ್ಕು ಮತ್ತು ರೇಷನ್‌ಕಾರ್ಡ್, ಡ್ರೈವಿಂಗ್ ಲೈಸೆನ್ಸ್, ಶಿಕ್ಷಣ ಪಡೆಯುವ ಹಕ್ಕು, ಉದ್ಯೋಗ, ಆರೋಗ್ಯ ಇತ್ಯಾದಿ ಹಕ್ಕುಗಳನ್ನು ಒಳಗೊಂಡಿದೆ.

(ಹೀಗಿದ್ದರೂ ಸಹ ಹಿಜ್ರಾಗಳು ತಮ್ಮ ಸ್ವಪ್ರಯತ್ನದಿಂದಾಗಿ ರೇಷನ್‌ಕಾರ್ಡ್, ಡ್ರೈವಿಂಗ್ ಲೈಸೆನ್ಸ್ ಅಥವ ಪಾಸ್‌ಪೋರ್ಟ್‌ನ್ನು ತಮ್ಮನ್ನು ಮಹಿಳೆ ಎಂದು ಘೋಷಿಸಿಕೊಂಡು

'ಟ್ರಾನ್ಸ್‌ಜೆಂಡರ್- ಅಂತರ ಲಿಂಗೀಯ

ಪಡೆದುಕೊಂಡಿದ್ದಾರೆ) ಅಂತಹ ಕೊರತೆಯು ಹಿಜ್ರಾಗಳನ್ನು ಭಾರತೀಯ ನಾಗರೀಕ ಸಮಾಜ ರಚನೆಯಿಂದಲೇ ಪ್ರತ್ಯೇಕಿಸಿಬಿಡುತ್ತದೆ.

ಉತ್ತರ ಭಾರತದಲ್ಲಿ ಹಿಜ್ರಾಗಳು ಚುನಾವಣೆಗೆ ನಿಂತು, ಗೆದ್ದು ಎಂ.ಎಲ್.ಎ., ಮೇಯರ್ ಮತ್ತು ಕೌನ್ಸಿಲರ್‌ಗಳಾಗಿರುವ ಉದಾಹರಣೆಗಳವೆ. ಈ ಚುನಾವಣೆಗಳು, ಖಂಡಿತವಾಗಿಯೂ ಜನನ ಸಮಯದ ಲಿಂಗ (ಗಂಡು) ಮತ್ತು ವಹಿಸಿಕೊಂಡ ಲಿಂಗ ಅಸ್ಮಿತೆ (ಹೆಣ್ಣು)ಗಳ ನಡುವಿನ ವ್ಯತ್ಯಾಸದಿಂದಾಗಿ ಕಾನೂನು ಸಮ್ಮತ ಸವಾಲಿನೆದುರು ಖಂಡನೆಗೊಳಗಾದವು. ಇತ್ತೀಚೆಗೆ ಕ್ವಿಯರ್ ಸಮುದಾಯದ ಮೇಲೆ ಪರಿಣಾಮ ಬೀರುವ ಪ್ರಕರಣವೊಂದು ಜರುಗಿತು. ಮಧ್ಯಪ್ರದೇಶ ಹೈಕೋರ್ಟು, ಹಿಜ್ರಾ ಕಮಲಜಾನ್‌ಳ ಚುನಾವಣೆಯನ್ನು ರದ್ದುಪಡಿಸಿದ ಚುನಾವಣ ನ್ಯಾಯಾಧೀಕರಣದ ಆಜ್ಞೆಯನ್ನು ಎತ್ತಿಹಿಡಿಯಿತು. ಕಟ್ನಿಯ ಮೇಯರ್ ಹುದ್ದೆಗೆ ಸ್ಪರ್ಧಿಸಿದ ಕಮಲಜಾನ್‌ಳನ್ನು, ಆ ಹುದ್ದೆ ಮಹಿಳೆಯರಿಗೆ ಮೀಸಲಾಗಿದ್ದೆಂದು, ಕಮಲ ಗಂಡಾದ್ದರಿಂದ ಆ ಹುದ್ದೆಗೆ ಅಭ್ಯರ್ಥಿಯಾಗಿ ನಿಲ್ಲಲು ಸಾಧ್ಯವಾಗದೆಂಬ ಆಧಾರದ ಮೇಲೆ ರದ್ದುಪಡಿಸಲಾಯ್ತು. ಹಾಗೆಯೇ ಗೋರಖ್‌ಪುರ್‌ನ ಮೇಯರ್ ಆದ ಆಶಾರಾಣಿಯ ಚುನಾವಣೆಯನ್ನು ಕೋರ್ಟು ಆಕೆ ಜೈವಿಕವಾಗಿ ಹೆಣ್ಣಲ್ಲವೆಂಬ ಆಧಾರದ ಮೇಲೆ ರದ್ದುಪಡಿಸಿತು. ಈ ತೀರ್ಪುಗಳು ಮುಖ್ಯವಾಗಿ ಹೇಳುವುದೇನೆಂದರೆ ಲಿಂಗವನ್ನು ಯಾರೊಬ್ಬರು ಆಯ್ಕೆ ಮಾಡಿಕೊಳ್ಳುವಂತಿಲ್ಲ ಮತ್ತು ಜನನ ಸಮಯದ ಲಿಂಗಕ್ಕೆ ಸೀಮಿತವಾಗಬೇಕೆಂದು.

ಮುಖ್ಯವಾಗಿ ಗಮನಿಸಬೇಕಾದ ಅಂಶವೆಂದರೆ ಲಿಂಗ ಮತ್ತು ಲೈಂಗಿಕತೆಗಳು ಕಾನೂನಿನ ನಿಯಂತ್ರಣದಲ್ಲಿವೆ ಎಂಬುದನ್ನು. ವ್ಯಕ್ತಿಯೊಬ್ಬರು ಜನನ ಸಮಯದಲ್ಲಿ ಯಾವ ಲಿಂಗದಲ್ಲಿ ಹುಟ್ಟಿರುತ್ತಾರೋ ಅದೇ ಲಿಂಗದಲ್ಲಿ ಜೀವಿಸಲು ಕಾನೂನು ಬಲವಂತ ಪಡಿಸುತ್ತದೆ. ಭಾರತದಲ್ಲಿ ಲಿಂಗ ಬದಲಾವಣೆಯನ್ನು ಕಾನೂನು ಇನ್ನೂ ಮಾನ್ಯ ಮಾಡಿಲ್ಲ. ಹಾಗಾಗಿ ಗಂಡು ಹಾಗು ಹೆಣ್ಣೆಂಬ ಲಿಂಗದ ದ್ವಿ ವಿಂಗಡಣೆಯು ಮೂರನೇ ಲಿಂಗ ವಿಂಗಡಣೆಯನ್ನು ಗುರುತಿಸುವುದಿಲ್ಲವಾದ್ದರಿಂದ ಹಿಜ್ರಾಗಳ ಟ್ರಾನ್ಸ್‌ಜೆಂಡರ್ ಅಸ್ತಿತ್ವವು ಕಾನೂನಿನ ದೃಷ್ಟಿಯಲ್ಲಿ ಅನಾಮಧೇಯವಾಗಿದೆ. ಜನನ ಸಂದರ್ಭದಲ್ಲಿ ನಿಗದಿ ಮಾಡುವ ಲಿಂಗವೇ ಮುಂದಿನ ಎಲ್ಲಾ ಕಾನೂನಿನ ವ್ಯವಹಾರಕ್ಕೂ ಅನ್ವಯಿಸುತ್ತೆಂಬುದು ಕಾನೂನಿನ ಉಗ್ರತೆಯನ್ನು ದೃಷ್ಟಾಂತಗೊಳಿಸುತ್ತದೆ. ಹಾಗಾಗಿ ಗಂಡಾಗಿ ಹುಟ್ಟಿ ಕಾನೂನು ಸಮ್ಮತ ಲಿಂಗವನ್ನು ಹೊಂದ ಬಯಸುವುದು ಹಿಜ್ರಾಗೆ ಅಸಾಧ್ಯವಾದುದು.

ಕ್ರೂರ ವಿರೋಧಾಬಾಸವೆಂದರೆ ಹಿಜ್ರಾಗಳ ಟ್ರಾನ್ಸ್‌ಜೆಂಡರ್ ಅಸ್ಮಿತೆಯು ಅಪರಾಧ ಕಾಯ್ದೆಯನ್ನು ಜಾರಿಗೊಳಿಸುವಲ್ಲಿ ಮತ್ತು ಅವರ ಇರುವಿಕೆಯನ್ನೆ ಅಪರಾಧೀಕರಣಗೊಳಿಸುವಲ್ಲಿ ಅದು ವಹಿಸುವ ಪಾತ್ರವು ಸಮಸ್ಯೆಯಾಗುವುದಿಲ್ಲ. ನಾಗರೀಕ ಕಾಯ್ದೆಯಡಿ ಹಕ್ಕುಗಳನ್ನು ಪಡೆಯುವುದಕ್ಕೆ ಸಂಬಂಧಪಟ್ಟಂತೆ ಮಾತ್ರ ಟ್ರಾನ್ಸ್‌ಜೆಂಡರ್ ಅಸ್ಮಿತೆಯು ತಡೆಯೊಡ್ಡುವ ಬಂಡೆಯಾಗಿ ಬಿಡುತ್ತದೆ.

### 4.3 ವೈದ್ಯಕೀಯ ವ್ಯವಸ್ಥೆ

ವೈದ್ಯಕೀಯ ವ್ಯವಸ್ಥೆಯು ಹಿಜ್ರಾಗಳು ಮತ್ತು ಕೋಥಿಗಳ ಕುರಿತು ಸಹನೆ ಬೆಳೆಸಿಕೊಳ್ಳುವ ಸಂಸ್ಕೃತಿಯನ್ನು ಹುಟ್ಟು ಹಾಕುವಲ್ಲಿ ಪ್ರಮುಖ ಪಾತ್ರವಹಿಸಿವೆ. ತಾರತಮ್ಯಕ್ಕೆ ಒಳಪಡದೆ ಚಿಕಿತ್ಸೆ ಪಡೆಯುವ ಸಾಮರ್ಥ್ಯ ಮತ್ತು ತಮ್ಮದೆ ಸ್ವಯಂ ಮತ್ತು ಅಸ್ಮಿತೆಯನ್ನು ರೂಪಿಸಿಕೊಳ್ಳುವುದಕ್ಕೆ ಸಂಬಂಧಪಟ್ಟಂತೆ ಹಿಜ್ರಾಗಳು ಮತ್ತು ಕೋಥಿಗಳ ಬದುಕಿನಲ್ಲಿ ವೈದ್ಯಕೀಯ ವ್ಯವಸ್ಥೆಯು ಮಹತ್ವದ

ಪಾತ್ರ ವಹಿಸುತ್ತದೆ. ಹಿಜ್ರಾಗಳು ಮತ್ತೊಂದು ಲಿಂಗಕ್ಕೆ ಸ್ಥಿತ್ಯಂತರವಾಗಬೇಕೆಂದು ಬಯಸಿದಾಗ ಆ ಪ್ರಕ್ರಿಯೆಗೆ ಅನುವು ಮಾಡಿಕೊಡುವಲ್ಲಿ ವೈದ್ಯಕೀಯ ವೃತ್ತಿಯು ನಿರ್ಣಾಯಕ ಪಾತ್ರ ವಹಿಸುತ್ತದೆ. ಈ ಸ್ಥಿತ್ಯಂತರವನ್ನು ವೈದ್ಯಕೀಯ ಪರಿಭಾಷೆಯಲ್ಲಿ ಜೆಂಡರ್ ಐಡೆಂಟಿಟಿ ಡಿಸ್ ಆರ್ಡರ್ (ಲಿಂಗ ಅಸ್ಮಿತೆಯ ಅವ್ಯವಸ್ಥೆ) ಎಂದು ವರ್ಗೀಕರಿಸಲಾಗಿದೆ.

ಎರಡು ಮುಖ್ಯ ರೋಗ ಲಕ್ಷಣ ವ್ಯವಸ್ಥೆಗಳಾದ ICD 10 ಮತ್ತು DSM IV ಪ್ರಕಾರ ಲಿಂಗ ಸ್ಥಿತ್ಯಂತರವು ಲಿಂಗ ಅಸ್ಮಿತೆಯ ಅವ್ಯವಸ್ಥೆಯಾಗಿದೆ. ಅಲ್ಲಿ ವಿರುದ್ಧ ಲಿಂಗದೊಂದಿಗಿನ ಗುರುತಿಸಿಕೊಳ್ಳುವಿಕೆ ಮತ್ತು ಬೇರೆ ಲಿಂಗದವರಂತೆ ಬದುಕುವ ಮತ್ತು ಆ ಸದಸ್ಯರಿಗೆ ಒಪ್ಪಿತವಾಗಬೇಕೆಂಬುದು ಪ್ರಬಲವಾದುದು ಮತ್ತು ನಿರಂತರವಾದುದು. ಟ್ರಾನ್ಸ್‌ಜೆಂಡರ್ ವ್ಯಕ್ತಿಯು ಅವನ ಅಥವ ಅವಳ ಶರೀರ ರಚನೆಯ ಲಿಂಗದ ಬಗ್ಗೆ ನಿರಂತರವಾಗಿ ಅಸೌಖ್ಯವನ್ನು ಅನುಭವಿಸುವರು. ಆ ಲಿಂಗದ ಪಾತ್ರಕ್ಕೆ ತಕ್ಕವರಲ್ಲವೆಂಬ ಭಾವನೆ ಇರುತ್ತದೆ. ಆಕ್ಸ್‌ಫರ್ಡ್ ಕಂಪಾನಿಯನ್ ಪ್ರಕಾರ........ ಲಿಂಗ ಸ್ಥಿತ್ಯಂತರವು – "ಶರೀರ ರಚನೆಯ ಲಿಂಗಕ್ಕೆ ವಿರುದ್ಧವಾಗಿ ಪುರುಷತ್ವ ಅಥವ ಸ್ತ್ರೀತ್ವದ ಭಾವನೆಯೊಂದಿಗೆ ಗುರುತಿಸಿಕೊಳ್ಳುವ ಮಾನಸಿಕ ಲಿಂಗದ ಬಗ್ಗೆ ಭಾವೋದ್ದೀಪ್ತ ಹಾಗೂ ಜೀವನ ಪರ್ಯಂತ ಬದ್ಧವಾಗುವ ಲಕ್ಷಣವನ್ನು ಪಡೆದಿದೆ". ಮಾನಸಿಕ ಲಿಂಗಕ್ಕೆ ಸಾಧ್ಯವಾದಷ್ಟು ಒಪ್ಪುವಂತಹ ದೇಹವನ್ನು ಹೊಂದಲು ಹಾರ್ಮೋನ್ ಚಿಕಿತ್ಸೆ ಮತ್ತು ಶಸ್ತ್ರ ಚಿಕಿತ್ಸೆಯನ್ನು ಪಡೆಯುವ ಬಯಕೆ ಇರುತ್ತದೆ. ಚಿಕಿತ್ಸೆಯ ಉದ್ಧೇಶವೆಂದರೆ ಮಾನಸಿಕ ಲಿಂಗದೊಂದಿಗೆ ದೈಹಿಕ ಲಿಂಗವನ್ನು ಸಾಮರಸ್ಯಗೊಳಿಸುವುದಾಗಿದೆ.

GID ಯು ಖಚಿತವಾದಾಗ ಸಾಧ್ಯವಿರುವ ಒಂದು ಚಿಕಿತ್ಸೆ ಎಂದರೆ SRS ಚಿಕಿತ್ಸೆ. SRS ಚಿಕಿತ್ಸೆಯಲ್ಲಿ ಒಂದು ಮಾದರಿಯ ಚಿಕಿತ್ಸೆ ಇಲ್ಲ. ಬದಲಿಗೆ ವಿಧಾನದಲ್ಲಿನ ವೈವಿಧ್ಯತೆಯನ್ನು ರೋಗ ಲಕ್ಷಣ ಕುರಿತ ನಿರಂತರ ವೃತ್ತೀಯ ಚರ್ಚೆಯ ಭಾಗವಾಗಿ ಬೆಂಬಲಿಸಲಾಗಿದೆ ಅನ್ವೇಷಣೆಯಾಗಿ ನೋಡಲಾಗಿದೆ. ಪ್ರಸ್ತುತದಲ್ಲಿ ಒಪ್ಪಿತವಾಗಿರುವ ಮತ್ತು ಪರಿಣಾಮಕಾರಿಯಾದ ಚಿಕಿತ್ಸಾ ಮಾದರಿಯಲ್ಲಿ ಹಾರ್ಮೋನ್ ಚಿಕಿತ್ಸೆಯನ್ನು, ಶಸ್ತ್ರ ಚಿಕಿತ್ಸೆಯ ಮೂಲಕ ಮರು ನಿರ್ಮಾಣವನ್ನು ಬಳಸಲಾಗುತ್ತದೆ. ಇದು ಎಲೆಕ್ಟ್ರಾಲಿಸಿಸ್, ಧ್ವನಿ ಚಿಕಿತ್ಸೆ ಮತ್ತು ಕೌನ್ಸಿಲಿಂಗ್ ಹಾಗೂ ಇತರ ಮನೋವೈಜ್ಞಾನಿಕ ಚಿಕಿತ್ಸೆಗಳನ್ನೂ ಒಳಗೊಳ್ಳಬಹುದು. ಶಸ್ತ್ರಚಿಕಿತ್ಸೆಯ ಮೂಲಕ ಮಾಡುವ ಮರು ನಿರ್ಮಾಣವು ಯೋನಿ ನಿರ್ಮಾಣ, ಶಿಶ್ನ ತೆಗೆಯುವುದು, ಚಂದ್ರನಾಡಿಯ ನಿರ್ಮಾಣ ಇತ್ಯಾದಿಗಳನ್ನೊಳಗೊಂಡಿದೆ. ಹಿಂದೂಸ್ಥಾನ್ ಟೈಮ್ಸ್ ವರದಿ (ಡಿಸೆಂಬರ್ 20, 2002) ಪ್ರಕಾರ ನವದೆಹಲಿಯ ಲೋಕನಾಯಕ ಜೆ.ಪಿ ಆಸ್ಪತ್ರೆಯ ಪ್ಲಾಸ್ಟಿಕ್ ಸರ್ಜರಿ ವಿಭಾಗವು 27 ವಯಸ್ಸಿನ 'ಟ್ರಾನ್ಸ್‌ಸೆಕ್ಷುವಲ್ ರಂಜನ್‌ರವರಿಗೆ ಯಶಸ್ವಿಯಾಗಿ SRS ಚಿಕಿತ್ಸೆಯನ್ನು ನಿರ್ವಹಿಸಿತು. ಇದು ಕಳೆದೆರೆಡು ವರ್ಷಗಳಲ್ಲಿ ಮಾಡಿದ ಹಲವಾರು ಶಸ್ತ್ರ ಚಿಕಿತ್ಸೆಗಳಲ್ಲಿ ಒಂದು. ಕ್ಲಿಷ್ಟಕರವಾದ ಶಸ್ತ್ರ ಚಿಕಿತ್ಸೆಯನ್ನು ಏಳು ಗಂಟೆಗಳ ಕಾಲ ಮಾಡಲಾಯಿತು. ಖಾಸಗಿ ಆಸ್ಪತ್ರೆಗಳಲ್ಲಿ 15 ಲಕ್ಷ ವೆಚ್ಚವಾಗಬಹುದಾದ ಶಸ್ತ್ರ ಚಿಕಿತ್ಸೆಯನ್ನು ಉಚಿತವಾಗಿ ಮಾಡಲಾಯಿತು. ಈ ಶಸ್ತ್ರ ಚಿಕಿತ್ಸೆಯನ್ನು ಮಾಡಿದ ಡಾ||ರಾಜೀವ್ ಅಹುಜ ಅವರ ಪ್ರಕಾರ ಪ್ರತಿವರ್ಷ ಒಂದು ಡಜನ್ ಟ್ರಾನ್ಸ್‌ಸೆಕ್ಷುವಲ್‌ಗಳು ಶಸ್ತ್ರ ಚಿಕಿತ್ಸೆಯನ್ನರಸಿ ಬರುತ್ತಾರೆ. ಇಂತಹ ಶಸ್ತ್ರ ಚಿಕಿತ್ಸೆಗಳನ್ನು ಕೇರಳದಲ್ಲಿಯೂ ಮಾಡಲಾಗಿದೆ.

ಸಾಮಾನ್ಯವಾಗಿ ಹಿಜ್ರಾ ಸಮುದಾಯದಲ್ಲಿ SRS ಲಭ್ಯತೆ ಕುರಿತಂತೆ ಮಿತಿ ಇದೆ. ಚೆನ್ನೈನಲ್ಲಿ ವೈದ್ಯರಾಗಿರುವ ಸಿ.ವೆಂಕಟೇಶ್‌ರವರು "ಶಿಕ್ಷಿತ ಮತ್ತು ಶ್ರೀಮಂತ 'ಗಂಡಿನಿಂದ ಹೆಣ್ಣಾಗ

'ಟ್ರಾನ್ಸ್‌ಸೆಕ್ಷುವಲ್- ಆಪರೇಷನ್ ಮಾಡಿಸಿಕೊಂಡು ಲಿಂಗ ಬದಲಾಯಿಸಿಕೊಳ್ಳುವವರು.

ಬಯಸುವ ಟ್ರಾನ್ಸ್‌ಸೆಕ್ಷುವಲ್‌ಗಳಿಗೆ ಸರ್ಜನ್‌ಗಳು, ಪ್ಲಾಸ್ಟಿಕ್ ಸರ್ಜನ್‌ಗಳು ಲಭ್ಯರಿರುತ್ತಾರೆ. ಬಹಳಷ್ಟು ಹಿಜ್ರಾಗಳು ಕೆಳ ಸಮಜೋ-ಆರ್ಥಿಕ ಸ್ಥಿತಿಯಿಂದ ಬಂದವರಾಗಿರುತ್ತಾರೆ ಹಾಗಾಗಿ SRS ಮಾಡಿಸಿಕೊಳ್ಳುವುದು ಸಾಧ್ಯವಾಗುವುದಿಲ್ಲ. ಅಲ್ಲದೆ SRS ಅನ್ನು ಸರ್ಕಾರಿ ಆಸ್ಪತ್ರೆಗಳಲ್ಲಿ ಮಾಡಲಾಗುತ್ತದೆ; ಖಾಸಗಿ ನಿಪುಣ ವೈದ್ಯರು (ಸಾಮಾನ್ಯ/ಪ್ಲಾಸ್ಟಿಕ್ ಸರ್ಜನ್‌ಗಳು) ಸಹ SRS ಮಾಡುವುದಿಲ್ಲ. ಕೆಲವರು ಮಾಡುತ್ತಾರಾದರೂ ದುಬಾರಿ ವೆಚ್ಚ ಬರಿಸಬೇಕಾಗುತ್ತದೆ. ಬಹಳಷ್ಟು ಹಿಜ್ರಾಗಳು ಕ್ಯಾಸ್ಟ್ರೇಶನ್ ಮಾಡುವ ಡೋಂಗಿ ವೈದ್ಯರುಗಳ ಬಳ ಹೋಗುತ್ತಾರೆ'' ಎಂದು ಹೇಳುತ್ತಾರೆ. ಸರಳವೆಂದು ಕರೆಸಿಕೊಳ್ಳುವ ಕ್ಯಾಸ್ಟ್ರೇಶನ್ ಮಾಡಿಸಿಕೊಳ್ಳಲು ಹಿಜ್ರಾಗಳು ಸಾಮಾನ್ಯವಾಗಿ ಡೋಂಗಿ ವೈದ್ಯರುಗಳ ಬಳ ಅಥವ ಹಿರಿಯ ಹಿಜ್ರಾಗಳ (ಅವರನ್ನು ತಾಯ್‌ಅಮ್ಮ ಎಂದು ಕರೆಯುತ್ತಾರೆ) ಬಳ ಹೋಗುತ್ತಾರೆ. ಈ ರೀತಿ ಮಾಡಿಸಿಕೊಳ್ಳುವುದು ಆರೋಗ್ಯದ ಮೇಲೆ ಅಪಾಯಕಾರಿ ಪರಿಣಾಮ ಬೀರುತ್ತದೆ. ಪಿ.ಯು.ಸಿ.ಎಲ್.-ಕೆ ನ ಮೊದಲ ವರದಿಯು ಗಮನಿಸಿದ ಅಂಶವೇನೆಂದರೆ ''ಇಂತಹ ಶಸ್ತ್ರ ಚಿಕಿತ್ಸೆಗಳು ಪರಿಣಿತರಲ್ಲದ ವೈದ್ಯರುಗಳಿಂದ ತೀರಾ ಅನಾರೋಗ್ಯಕರ ವಾತಾವರಣಗಳಲ್ಲಿ ನಡೆಯುತ್ತವೆ. ಜೀವಕ್ಕೆ ಅಪಾಯವಾಗುವ ಸಂಭವವೂ ಇರುತ್ತದೆ. ಮನೋರಮ ಹಾಗೂ ಅವಳ ಇಬ್ಬರು ಸ್ನೇಹಿತೆಯರು ಶಸ್ತ್ರ ಚಿಕಿತ್ಸೆಯನ್ನು ಮಾಡಿಸಿಕೊಳ್ಳಲು ನಿರ್ಧರಿಸಿದಾಗ ಅವರ ಹತ್ತಿರ ಬೇಕಾದ ಹಣ ಇರಲಿಲ್ಲ. ಆ ಹಣ ಸಂಪಾದನೆ ಮಾಡಲು ದೇಹ ಮಾರಿಕೊಂಡರು. ಅವರೊಡನೆ ಇದ್ದ ಇನ್ನೊಬ್ಬ ಹಿಜ್ರಾ ಕಮೀಷನ್ ತೆಗೆದುಕೊಂಡು, ಇಂತಹ ಶಸ್ತ್ರ ಚಿಕಿತ್ಸೆಗೆ ಹೆಸರುವಾಸಿಯಾದ ದಿಂಡಗಲ್‌ನ ವೈದ್ಯರೊಬ್ಬರ ಬಳ ಅವರನ್ನು ಕರೆದುಕೊಂಡು ಹೋದಳು. ಶೂಶ್ರಷೆಯ ಖರ್ಚು ಬಿಟ್ಟು, ಶಸ್ತ್ರ ಚಿಕಿತ್ಸೆಗೆ 5000/- ತೆಗೆದುಕೊಳ್ಳಲಾಯಿತು. ಆ ವೈದ್ಯರ ಆಸ್ಪತ್ರೆಯು ಗಾಳಿ ಬೆಳಕಿಲ್ಲದ ಪುಟ್ಟ ಕೋಣೆ. ಅದರಲ್ಲಿದ್ದುದು ಒಂದೇ ಶೌಚಾಲಯ. ಅಲ್ಲಿದ್ದ ಮೂರು ಬೆಂಚುಗಳೇ ಆಪರೇಷನ್ ಟೇಬಲ್ ಆಗಿತ್ತು. ಶಸ್ತ್ರ ಚಿಕಿತ್ಸೆ ಎಂತಹ ನೋವಿನಿಂದ ಕೂಡಿತ್ತೆಂದರೆ, ''ಹಿಜ್ರಾ ಆಗಲು ಇಷ್ಟು ನೋವು ಅನುಭವಿಸಬೇಕೆ'' ಎಂದು ಮನೋರಮ ಪ್ರಶ್ನಿಸಿಕೊಳ್ಳುತ್ತಾಳೆ. ಶಸ್ತ್ರ ಚಿಕಿತ್ಸೆಯನ್ನು ಸರಿಯಾಗಿ ಮಾಡದಿದ್ದರಿಂದ ಸೋಂಕಾಗಿ ಮೂತ್ರದ ನಿಯಂತ್ರಣ ಕಳೆದುಕೊಂಡು ಹಲವು ತೊಂದರೆಗಳಿಗೆ ಈಡಾಗಬೇಕಾಯಿತು. ಶಸ್ತ್ರ ಚಿಕಿತ್ಸೆಗೆ ಮೊದಲು ಮಾಡಬೇಕಿದ್ದ ಮೂತ್ರ, ರಕ್ತ ಪರೀಕ್ಷೆಗಳನ್ನು ಮಾಡಿರಲಿಲ್ಲ. ಸೊಂಕನ್ನು ನಿವಾರಿಸಲು ಮತ್ತೊಬ್ಬ ವೈದ್ಯರನ್ನು ಕಾಣಬೇಕಾಯಿತು.''

ಇಂತಹ ಅಪಾಯಗಳು ಕೆಲವೇ ಕೇಸುಗಳಿಗೆ ಸೀಮಿತವಾಗದೆ, ಹಿಜ್ರಾಗಳು ವೈದ್ಯಕೀಯ ವ್ಯವಸ್ಥೆಯೊಡನೆ ಮುಖಾಮುಖಿಯಾದಾಗಲೆಲ್ಲ ಆಗುವಂತಹದು. ಡಾ॥ ವೆಂಕಟರಾಮನ್‌ರವರು ''ಸಾಂಪ್ರದಾಯಿಕವಾಗಿ ಕ್ಯಾಸ್ಟ್ರೇಷನ್ ಮಾಡಿಸಿಕೊಳ್ಳುವಾಗ ಆಗಬಹುದಾದ ಅಪಾಯಗಳೆಂದರೆ ನ್ಯೂರೊಜೆನಿಕ್ ಶಾಕ್ ಅಥವ ಹೈಪೋವೊಲೆಮಿಕ್ ಶಾಕ್ ಅಥವ ಹುಣ್ಣಿಗೆ ಸೋಂಕು ತಗುಲುವುದರಿಂದ ಸಂಭವಿಸುವ ಸಾವು' ಎಂದು ಹೇಳುತ್ತಾರೆ. ಸಾವು ಸಂಭವಿಸದಿದ್ದರೂ ''......... ಆಪರೇಷನ್ ನಂತರ ಮೂತ್ರದ ತೊಂದರೆ'' ಉಂಟಾಗಿದೆ ಎಂದು ಹಲವಾರು ಹಿಜ್ರಾಗಳು ಹೇಳಿದ್ದಾರೆಂದು ಡಾ॥ ವೆಂಕಟೇಶ್ ಹೇಳಿದ್ದಾರೆ. ಈ ತೊಂದರೆಗಳಾಗಿರುವುದು ತಾಯ್ ಅಮ್ಮ ಅಥವ ಡೋಂಗಿ ವೈದ್ಯರಿಂದ ಆಪರೇಷನ್ ಮಾಡಿಸಿಕೊಂಡ ನಂತರ. ಇದು ಹಿಜ್ರಾ ಸಮುದಾಯವು ಎದುರಿಸುವ ಬಹುಮುಖ್ಯ ಆರೋಗ್ಯ ಸಮಸ್ಯೆ.

SRS ಹಾಗೂ ಕ್ಯಾಸ್ಟ್ರೇಷನ್ ಕುರಿತ ಕಾನೂನಿನ ಮನೋಭಾವನೆಯಿಂದಾಗಿ ಶುಚಿಯಾದ, ನುರಿತ, ಬರಿಸಲು ಸಾಧ್ಯವಾಗಬಹುದಾದ ಚಿಕಿತ್ಸೆಯು ದುಬಾರಿಯಾಗಿದೆ. ಹಾಗಾಗಿ ಅವುಗಳನ್ನು

ಪಡೆದುಕೊಳ್ಳುವುದು ಸಮಸ್ಯೆಯಾಗಿದೆ. ಭಾರತದಲ್ಲಿನ ಕಾನೂನು, ಟ್ರಾನ್ಸ್‌ಸೆಕ್ಸುವಾಲಿಟಿ ಕುರಿತು ಚಿಂತನೆ ನಡೆಸಿಯೇ ಇಲ್ಲ. ನಿಜವೇನೆಂದರೆ ಭಾರತೀಯ ದಂಡ ಸಂಹಿತೆಯ ಸೆಕ್ಷನ್ 320ರ ಪ್ರಕಾರ ಯಾರಿಗಾದರೂ ಕ್ಯಾಸ್ಟ್ರೇಶನ್ ಮಾಡುವುದು ಆತನಿಗೆ ಗಂಭೀರವಾದ ಗಾಯ ಮಾಡಿದಂತೆ. ಆದ್ದರಿಂದ ಭಾ.ದಂ.ಸಂ.ಯ ಸೆಕ್ಷನ್ 325ರ ಪ್ರಕಾರ ಅದು ಶಿಕ್ಷಾರ್ಹ. ಹಾಗಾಗಿ ಯಾರಾದರು ಸ್ವ-ಇಚ್ಛೆಯಿಂದ ಕ್ಯಾಸ್ಟ್ರೇಶನ್ ಮಾಡಿಸಿಕೊಂಡರೆ, ಮಾಡಿದವರು ಮೇಲಿನ ಸೆಕ್ಷನ್ ಪ್ರಕಾರ ಶಿಕ್ಷಾರ್ಹರು. ಮಾಡಿಸಿಕೊಂಡವರು ಸಹ ಅಪರಾಧಕ್ಕೆ ಪ್ರೇರಣೆ ನೀಡಿದರೆಂಬ ಕಾರಣಕ್ಕೆ ಶಿಕ್ಷಾರ್ಹರು. ಹಾಗಾದರೂ ಭಾರತೀಯ ದಂಡ ಸಂಹಿತೆಯ ಸೆಕ್ಷನ್ 88ರಲ್ಲಿ ವಿನಾಯಿತಿ ಇದೆ. ಉತ್ತಮ ವಿಶ್ವಾಸದಲ್ಲಿ ಕ್ರಿಯೆಯನ್ನು ಕೈಗೊಂಡಿದ್ದರೆ ಮತ್ತು ಹಾನಿಯನ್ನು ಅನುಭವಿಸಲು ವ್ಯಕ್ತಿಯು ಸಮ್ಮತಿಸಿದ್ದರೆ ವಿನಾಯಿತಿ ಇದೆ. ಈ ಸೆಕ್ಷನ್‌ನಲ್ಲಿ ಈ ರೀತಿ ಹೇಳಲಾಗಿದೆ. "ಸಾವನ್ನುಂಟು ಮಾಡುವ ಉದ್ದೇಶವಿಲ್ಲದಂತಹದು ಅಪರಾಧವಲ್ಲ. ಚಿಕಿತ್ಸೆಯು ಹಾನಿಯುಂಟು ಮಾಡಿತೆಂಬ ಕಾರಣಕ್ಕೆ ಅಥವ ಚಿಕಿತ್ಸೆ ಮಾಡುವವರ ಉದ್ದೇಶ ಅದಾಗಿರದಿದ್ದರೆ, ಮಾಡಿಸಿಕೊಳ್ಳುವವರ ಪ್ರಯೋಜನಕ್ಕಾಗಿ ವಿಶ್ವಾಸದಿಂದ ಮತ್ತು ಆ ಹಾನಿಯನ್ನು ಅನುಭವಿಸಲು ಅವನ ಸಮ್ಮತಿ ಇದ್ದರೆ, ಹಾನಿಯನ್ನು ಅಪಾಯವನ್ನು ಎದುರಿಸಲು ಸಿದ್ಧನಿದ್ದರೆ ಅದು ಅಪರಾಧವಾಗುವುದಿಲ್ಲ."

ಆದರೆ ವಾಸ್ತವದಲ್ಲಿ ಕಾನೂನಿನ ಪ್ರಕ್ರಿಯೆ ಜಾರಿಯಾಗುವುದು ಯಾರಾದರೂ ಎಫ್.ಐ.ಆರ್. ಅನ್ನು ಸಂಬಂಧಪಟ್ಟ ಪೋಲೀಸ್ ಠಾಣೆಯಲ್ಲಿ ದಾಖಲಿಸಿದಾಗ ಅಥವ ಖಾಸಗೀ ದೂರು ದಾಖಲಿಸಿದಾಗ. ಇದು SRS ಕ್ಯಾಸ್ಟ್ರೇಶನ್‌ಗೆ ಸಂಬಂಧಪಟ್ಟಂತೆ ಸಾಧ್ಯವಾಗುವುದಿಲ್ಲ ಕಾರಣ ವೈದ್ಯರು ಮತ್ತು ರೋಗಿ ಇಬ್ಬರು ವ್ಯವಹಾರಕ್ಕೆ ಸಮ್ಮತಿಸಿರುವ ಪಾರ್ಟಿಗಳಾದ್ದರಿಂದ ಮತ್ತು ಅವರು ಅಪರಾಧ ಕಾನೂನಿನ ಪ್ರಕ್ರಿಯೆಯನ್ನು ಜಾರಿಗೊಳಿಸುವುದು ಅಸಂಭವನೀಯವಾದ್ದರಿಂದ ಭಾರತದಲ್ಲಿ, SRS ಮೂಲಕ ತೀವ್ರ ಹಾನಿಯಾಗಿದೆ ಎಂದೋ ಅಥವ ತೀವ್ರವಾದ ಹಾನಿಗೆ ದುಷ್ಪ್ರೇರಣೆಯಾಗಿದೆ ಎಂಬ ಕಾರಣಕ್ಕೆ ವೈದ್ಯರ ಮೇಲಾಗಲಿ, ರೋಗಿಯ ಮೇಲಾಗಲಿ ಕ್ರಮ ಜರುಗಿಸಿಲ್ಲ. ಅಸಂಭವನೀಯವಾದರೂ ಅಂತಹ ಪ್ರಕ್ರಿಯೆ ಜರುಗಿದಲ್ಲಿ SRS ಮಾಡುವ ನುರಿತ ವೈದ್ಯರಿಗೆ ಭಾರತೀಯ ದಂಡ ಸಂಹಿತೆ ಸೆಕ್ಷನ್ 88ರ ಸಾಮಾನ್ಯ ವಿನಾಯಿತಿಯ ರಕ್ಷಣೆ ಇದೆ.

ಕಾನೂನಿನ ಬಗ್ಗೆ ಸ್ಪಷ್ಟತೆ ಇಲ್ಲದಿರುವುದು ವೈದ್ಯಕೀಯ ವ್ಯವಸ್ಥೆಯ ಮೇಲೆ ಪರಿಣಾಮ ಹೊಂದಿದೆ. ಕಾನೂನು ಸಮ್ಮತವಾದ ಸುರಕ್ಷಿತ ಮತ್ತು ಸ್ವಚ್ಛವಾದ ವೈದ್ಯಕೀಯ ಸೌಲಭ್ಯಗಳನ್ನು ಕ್ಯಾಸ್ಟ್ರೇಶನ್‌ಗಾಗಿ ಪಡೆದುಕೊಳ್ಳುವುದು ಹಿಜ್ರಾಗಳಿಗೆ ಸಾಧ್ಯವಾಗಿಲ್ಲ. ಸಂಪನ್ಮೂಲ ಹಾಗು ಸಮ್ಮತಿ ಇರುವ ವೈದ್ಯರ ಸೇವೆಯನ್ನು ಪಡೆದುಕೊಳ್ಳಲು ಸಾಧ್ಯವಿರುವ ಹಿಜ್ರಾಗಳು ಕ್ಯಾಸ್ಟ್ರೇಶನ್‌ನಂತಹ ಶಸ್ತ್ರ ಚಿಕಿತ್ಸೆಯನ್ನು ಮಾಡಿಸಿಕೊಳ್ಳುತ್ತಾರೆ. ಇಲ್ಲವಾದರೆ ಇಂತಹ ಶಸ್ತ್ರ ಚಿಕಿತ್ಸೆಗಳನ್ನು ಮೂಢನಂಬಿಕೆಯ ವಾತಾವರಣಗಳಲ್ಲಿ ಮಾಡಲಾಗುತ್ತದೆ. ಅಲ್ಲಿ ನಿಪುಣತೆ, ಪರಿಣತಿ ಮತ್ತು ಜವಾಬ್ದಾರಿಗೆ ಅವಕಾಶ ಕಡಿಮೆ. SRS ಭಾರತದಲ್ಲಿ ಲಭ್ಯವಿದೆ. ಆದರೆ ಕಳ್ಳತನದಲ್ಲಿ ಭಾರತದಲ್ಲಿನ ವೈದ್ಯರುಗಳು ಟ್ರಾನ್ಸ್‌ಸೆಕ್ಷುವಲ್‌ಗಳು ಮತ್ತು ಹಿಜ್ರಾಗಳನ್ನು ಅವರಿಗೆ ಕ್ಯಾನ್ಸರ್ ಸಂಬಂಧಿ ತೊಂದರೆಗಳಿರುವುದರಿಂದ ಶಸ್ತ್ರ ಚಿಕಿತ್ಸೆಯ ಅಗತ್ಯವಿದೆ ಎಂಬ ಸಮ್ಮತಿ ಪತ್ರಕ್ಕೆ ಸಹಿ ಹಾಕಲು ಕೇಳುತ್ತಾರೆ. ಡಾ॥ ವೆಂಕಟೇಶ್ವರನ್ ಅವರು ಗಮನಿಸಿರುವಂತೆ "ಮೊದಲು 'ನವ-ಯೋನಿ' ರಚನೆ (ಕ್ಯಾಸ್ಟ್ರೇಶನ್ ಆಗಿರುವ ವ್ಯಕ್ತಿಗೆ ಯೋನಿಯಂತಹ ಮಾರ್ಗ ರಚಿಸುವುದು)ಯನ್ನು ಚೆನ್ನೈನ ಸರ್ಕಾರಿ ಜನರಲ್ ಆಸ್ಪತ್ರೆಯಲ್ಲಿ ಮಾಡಲಾಗುತ್ತಿತ್ತು. ಆದರೆ ಈಗ ಸರ್ಕಾರಿ ಆಸ್ಪತ್ರೆಯ ಯೂರಾಲಜಿ/ಪ್ಲಾಸ್ಟಿಕ್ ಸರ್ಜರಿ ವಿಭಾಗದಲ್ಲಿ ಆಸಕ್ತಿ ಮತ್ತು ನಿಪುಣತೆ ಕಡಿಮೆಯಾಗಿರುವುದರಿಂದ

ಮತ್ತು SRS ಕುರಿತ ಕಾನೂನಿನ ಸ್ಥಿತಿ ಅಸ್ಪಷ್ಟವಾಗಿರುವುದರಿಂದ ಮಾಡುತ್ತಿಲ್ಲ''

ವೈದ್ಯರು ಯೋಚಿಸುವುದು ಭಾ. ದಂ. ಸಂ. 'ತೀವ್ರ ಹಾನಿ'ಯ ಅವಕಾಶವಲ್ಲದೆ, SRS ಪ್ರಕ್ರಿಯೆಯಲ್ಲಿ ರೋಗಿಗಳು ನೀಡುವ ಸಮ್ಮತಿಯ ಸಿಂಧುತ್ವವನ್ನು. ಅಸಂಭವನೀಯ ಸಂದರ್ಭದಲ್ಲಿ ವೈದ್ಯರ ವಿರುದ್ಧ ಕೇಸನ್ನು ದಾಖಲಿಸಿದರೆ ಸೆಕ್ಷನ್ ೮೮ರ ಅನ್ವಯ ವಿನಾಯಿತಿ ಸಿಗುವುದು ಸಮ್ಮತಿಯು ಸಿಂಧುವಾಗಿದ್ದರೆ ಮಾತ್ರ. ಟ್ರಾನ್ಸ್‌ಸೆಕ್ಷುವಲ್‌ಗಳ ಸಂದರ್ಭದಲ್ಲಿ ಅವರು ಮಾನಸಿಕ ಅಸ್ವಸ್ಥತೆಯಡಿ ವಿಭಾಗಿಸಲಾದ GID ಯಿಂದ ಬಳಲುತ್ತಿರುವರೆಂಬ ಕಾರಣಕ್ಕೆ ಸಮ್ಮತಿಯ ಸೆಕ್ಷನ್‌ಅನ್ನು ಪ್ರಶ್ನಿಸಬಹುದು. ವ್ಯಕ್ತಿಯು ಮಗುವಾಗಿದ್ದಲ್ಲಿ ತಂದೆ ತಾಯಿಗಳ ಅಥವ ಪೋಷಕರ ಬೆಂಬಲ ಇಲ್ಲದಿರುವಾಗ ಚಿಕಿತ್ಸೆಯೇ ಅಸಾಧ್ಯವಾದ ಆಯ್ಕೆ.

ಭಾರತೀಯ ವೈದ್ಯಕೀಯ ಪರಿಷತ್ತು ಮತ್ತು ಭಾರತೀಯ ವೈದ್ಯಕೀಯ ಸಂಶೋಧನ ಪರಿಷತ್ತುಗಳೂ ಕೂಡ ಟ್ರಾನ್ಸ್‌ಸೆಕ್ಷುವಲ್ ವಿಷಯ ಕುರಿತು ಪ್ರತಿಕ್ರಿಯೆ ನೀಡಿಲ್ಲ. SRS ಒಂದು ಸಂಕೀರ್ಣ ಶಸ್ತ್ರ ಚಿಕಿತ್ಸೆಯಾಗಿದ್ದು ಅದಕ್ಕೆ [illegible] ಕರಾರುಗಳು ಮತ್ತು ಮಾರ್ಗದರ್ಶಿ ಸೂತ್ರಗಳ ಅಗತ್ಯವಿದೆ. ಭಾರತೀಯ ವೈದ್ಯ ಪರಿಷತ್ತಾಗಲಿ, ಭಾರತಿ ವೈದ್ಯಕೀಯ ಸಂಶೋಧನ ಪರಿಷತ್ತು ಆಗಲಿ ಯಾವ ಸಂಹಿತೆಯನ್ನಾಗಲಿ, ಮಾರ್ಗದರ್ಶಿ ಸೂತ್ರಗಳನ್ನಾಗಲಿ ರೂಪಿಸಿಲ್ಲ. ಈ ಕೊರತೆಯಿಂದಾಗಿ ಭಾರತದಲ್ಲಿ ಪೂರ್ವಯೋಜಿತವಲ್ಲದ ಅಪೂರ್ಣ ಪ್ರತಿಕ್ರಿಯೆಗಳು ಸೃಷ್ಟಿಯಾಗುತ್ತವೆ. ಉದಾಹರಣೆಗೆ ಇಡೀ ಶಸ್ತ್ರ ಚಿಕಿತ್ಸೆಯಲ್ಲಿ ಕೌನ್ಸಿಲಿಂಗ್ ಬಹುಮುಖ್ಯವಾದ ಭಾಗ, ಇದು ಟ್ರಾನ್ಸ್‌ಜೆಂಡರ್ ಜನರಿಗೆ ಲಭ್ಯವಾಗುವುದೇ ಇಲ್ಲ.

ಆದ್ದರಿಂದ ವೈದ್ಯಕೀಯ ವ್ಯವಸ್ಥೆಯೊಂದಿಗೆ ಹಿಜ್ರಾಗಳ ಒಡನಾಟವನ್ನು ಸಂಕ್ಷಿಪ್ತಗೊಳಿಸಿ ಹೇಳುವುದಾದರೆ, SRS ತುಂಬಾ ದುಬಾರಿಯಾದುದರಿಂದ, ಪಡೆದುಕೊಳ್ಳುವುದು ಕಷ್ಟ ಎಂಬುದು ಸ್ಪಷ್ಟವಾಗುತ್ತದೆ. ಇದೊಂದು ಸಾಮಾನ್ಯ ವ್ಯಕ್ತಿಗೆ ನಿಲುಕದ ಐಷಾರಾಮಿ ಚಿಕಿತ್ಸೆ ಎಂದೇ ಹೇಳಬಹುದು. ಇದು ಕೆಲವು ಆಯ್ದ ಆಸ್ಪತ್ರೆಗಳಲ್ಲಿ ಮಾತ್ರ ಲಭ್ಯವಿದೆ. (ವಿವರಗಳಿಗಾಗಿ ನೋಡಿ : http://www.geocities.com/pri_29_2000/indianbeauty-6.html) ಹಾಗಾಗಿ ಆರೋಗ್ಯಕ್ಕೆ ಹಾನಿಯಾಗಬಹುದಾದ ಮತ್ತು ಜೀವಕ್ಕೂ ಅಪಾಯವಾಗಬಹುದಾದ, ಷರತ್ತುಗಳ ಮೇಲೆ ಶಸ್ತ್ರ ಚಿಕಿತ್ಸೆಗೆ ಒಪ್ಪಿಕೊಳ್ಳುವವರನ್ನು ಹಿಜ್ರಾಗಳು ತಪ್ಪು ತಿಳಿಯುತ್ತಾರೆ.

ಇಂತಹ ಸಂದರ್ಭದಲ್ಲಿ ರಾಜ್ಯಾಧಿಕಾರದ ಮತ್ತು ನ್ಯಾಯಾಂಗದ ಮೊದಲ ಜವಾಬ್ದಾರಿ ಏನೆಂದರೆ ಸ್ವ-ಇಚ್ಛೆಯಿಂದ ಕ್ಯಾಸ್ಟ್ರೇಶನ್ ಮಾಡಿಸಿಕೊಳ್ಳುವುದನ್ನು ನಿರಪರಾಧೀಕರಣ ಗೊಳಿಸಬೇಕು. SRS ಮತ್ತು ಕ್ಯಾಸ್ಟ್ರೇಶನ್ ಸೌಲಭ್ಯಗಳಿಗೆ ಸೂಕ್ತ ಕಾನೂನು ಸಮ್ಮತ ಮತ್ತು ನೈತಿಕ ಕರಾರುಗಳನ್ನು ರಚಿಸಬೇಕು. ಆ ಮೂಲಕ ಯಾವುದೇ ಪೂರ್ವಯೋಜನೆ ಇಲ್ಲದ ಅಪೂರ್ಣ ಪ್ರಕ್ರಿಯೆಗಳನ್ನು ತಡೆಯಬೇಕು. ನಿರಪರಾಧೀಕರಣ ಮತ್ತು ಕಾನೂನು ಸಮ್ಮತೀಕರಣಕ್ಕೆ ಪೂರಕವಾದ ಸ್ಪಷ್ಟ ತಂತ್ರವನ್ನು ರೂಪಿಸುವ ಮೂಲಕ ಈ ಶಸ್ತ್ರ ಚಿಕಿತ್ಸೆಗಳನ್ನು ಸಮಗ್ರವಾಗಿರುವಂತೆ, ಸಮರ್ಥವಾಗಿರುವಂತೆ, ಲಭ್ಯವಾಗುವಂತೆ ಹಾಗು ಭರಿಸಲಾಗುವಂತೆ ಮಾಡಬೇಕು.

ಡಾ॥ ವೆಂಕಟೇಶನ್ ಹೇಳುವಂತೆ " ಬಹಳಷ್ಟು ಹಿಜ್ರಾಗಳು SRSಅನ್ನು ಉಚಿತವಾಗಿ, ಸರ್ಕಾರಿ ಆಸ್ಪತ್ರೆಗಳಲ್ಲಿ ಮಾಡಿಸಿಕೊಳ್ಳಬಯಸುತ್ತಾರೆ. ಜೊತೆಗೆ ಮಮ್ಮೊಪ್ಲಾಸ್ಟಿ, ವಜೈನಪ್ಲಾಸ್ಟಿ, ಮುಖದ ಕೂದಲು ತೆಗೆಯುವ ವಿಧಾನಗಳು, ತಲೆಗೂದಲು ಬೆಳೆಯುವ ವಿಧಾನ ಮತ್ತು ಧ್ವನಿ ಬದಲಾವಣೆಯೂ ಬೇಕೆನ್ನುತ್ತಾರೆ. ಬಹಳಷ್ಟು ಹಿಜ್ರಾಗಳು, ಸರ್ಕಾರಿ ಮತ್ತು ಖಾಸಗಿ ಆಸ್ಪತ್ರೆಗಳಲ್ಲಿ

ಹಾರ್ಮೋನ್ ಚಿಕಿತ್ಸೆ ಇಲ್ಲದ ಕಾರಣ ಹಾರ್ಮೋನ್ ಮಾತ್ರೆಗಳು/ಇಂಜೆಕ್ಷನ್‌ಗಳನ್ನು ತೆಗೆದುಕೊಳ್ಳುತ್ತಾರೆ.

ಈ ಸೌಲಭ್ಯಗಳ ಕೊರತೆಯೊಂದಿಗೆ ಮೇಲೆ ತಿಳಿಸಿದ ಅಪಾಯಗಳು, ತೊಂದರೆಗಳ ಅರ್ಥವೇನೆಂದರೆ. ಹಿಜ್ರಾಗಳು ಸಾಮಾನ್ಯವಾಗಿ ಅನುಭವಿಸುವ ಕೀಳರಿಮೆಯನ್ನೇ ಮರು ಸ್ಥಾಪಿಸುವ ಪ್ರಯತ್ನವನ್ನು ವೈದ್ಯಕೀಯ ವ್ಯವಸ್ಥೆಯು ಸೃಷ್ಟಿಸುತ್ತದೆ. ಈ ಕೀಳರಿಮೆಯ ಭಾವನೆ ಮತ್ತು ಕುಟುಂಬದವರಿಗೆ ಒಪ್ಪಿತವಾಗದಿರುವುದು ಆತ್ಮಹತ್ಯೆಯ ಬಗ್ಗೆ ಯೋಚಿಸುವಂತೆ ಅಥವ ಪ್ರಯತ್ನಿಸುವಂತೆ ಮಾಡುತ್ತದೆ ಎಂದು ನಾವು ಭೇಟಿ ಮಾಡಿದ ಹಲವಾರು ಹಿಜ್ರಾಗಳು ಹೇಳಿದರು.

ವೈದ್ಯಕೀಯ ವ್ಯವಸ್ಥೆಯಡಿ ಸಿಗುವ ಹೀನಾಯ ವರ್ತನೆಯು ಹಿಜ್ರಾಗಳ ಆತ್ಮಗೌರವವನ್ನು ಹೆಚ್ಚಿಸುವ ಬದಲಿಗೆ ನಾಶವನ್ನೇ ಮಾಡುತ್ತದೆ.

### 4.4 ಮಾಧ್ಯಮ

ಮಾಧ್ಯಮವು ಒಂದು ಪ್ರಬಲ ಕ್ಷೇತ್ರವಾಗಿದ್ದು ಅದರ ಮೂಲಕ ಅಭಿಪ್ರಾಯಗಳು, ಅಸ್ಮಿತೆಗಳು ಮತ್ತು ಸ್ವಯಂಗಳು ರೂಪುಗೊಳ್ಳುತ್ತವೆ. ಮಾಧ್ಯಮದ ಪ್ರತಿಕ್ರಿಯೆಗಳು ಮತ್ತು ಪ್ರತಿನಿಧಿತ್ವವು ಸಾಮಾನ್ಯ ಸಾಂಸ್ಕೃತಿಕ ಸ್ಮೃತಿಯ ಭಾಗವಾಗುವುದಲ್ಲದೆ. ವಿಷಯಗಳ ಕುರಿತು ಯೋಚಿಸುವ ರೀತಿಗಳನ್ನು ರೂಪಿಸುತ್ತದೆ. ಸಮಕಾಲೀನ ಜಗತ್ತಿನಲ್ಲಿ ಮಾಧ್ಯಮದ ಪ್ರತಿಮೆಗಳು ಸರ್ವವ್ಯಾಪಿ ಗುಣ ಹೊಂದಿವೆ ಮತ್ತು ಜಗತ್ತನ್ನು ಕುರಿತು ನಾವು ಯೋಚಿಸುವ ರೀತಿಯನ್ನು ನಿರ್ಬಂಧಿಸುವುದರಲ್ಲಿ ಪ್ರಬಲ ಪಾತ್ರವಹಿಸುತ್ತವೆ.

ಟ್ರಾನ್ಸ್‌ಜೆಂಡರ್ ಜನರ ಕುರಿತು ಬಹುಪಾಲು ಜನರು ಹೊಂದಿರುವ ಪೂರ್ವಾಗ್ರಹಗಳು ಮತ್ತು ಭಾವನೆಗಳು ಪ್ರಬಲವಾದ ರೀತಿಯಲ್ಲಿ ರೂಪುಗೊಳ್ಳುವುದು ಮಾಧ್ಯಮದಿಂದ. ಮಾಧ್ಯಮವು ರೂಢಿಗತ ವಿಷಯಗಳಿಗೆ ಒತ್ತು ನೀಡಬಹುದು. ಅಥವ ಘಟನೆಗಳು ಮತ್ತು ಜನಗಳು ಪ್ರತಿನಿಧಿತವಾಗುವ ರೀತಿಯನ್ನು ಪ್ರಶ್ನೆ ಮಾಡಬಹುದು. ಟ್ರಾನ್ಸ್‌ಜೆಂಡರ್ ಜನರ ಪ್ರತಿನಿಧಿತ್ವದ ಸಂದರ್ಭದಲ್ಲಿ ಗಮನಿಸಬಹುದಾದುದೇನೆಂದರೆ ಮಾಧ್ಯಮವು ಭಾರತದ ಟ್ರಾನ್ಸ್‌ಜೆಂಡರ್ ಸಮುದಾಯ ಕುರಿತ ಸಾಮಾನ್ಯ ಪೂರ್ವಾಗ್ರಹಗಳನ್ನೇ ಪ್ರತಿಫಲಿಸುತ್ತದೆ ಮತ್ತು ರೂಪಿಸುತ್ತದೆ. ಅದೊಂದು ಪ್ರಬಲ ಸಂಪನ್ಮೂಲವಾಗಿದ್ದು, ಕ್ವಿಯರ್ ಜನರನ್ನು ಕುರಿತ ಅಸಹನೆಯನ್ನು ಪದೇ ಪದೇ ಎತ್ತಿಹಿಡಿಯುತ್ತದೆ. ಮತ್ತದನ್ನು ಅಧಿಕೃತಗೊಳಿಸುತ್ತದೆ.

ಮಾಧ್ಯಮದಲ್ಲಿ ಕೋಥಿಗಳು, ಹಿಜ್ರಾಗಳು, ಸಲಿಂಗಕಾಮಿಗಳು ಮತ್ತು ಟ್ರಾನ್ಸ್‌ಜೆಂಡರ್ ಲೈಂಗಿಕಕಾರ್ಮಿಕರ ಪ್ರತಿನಿಧಿತ್ವವು ಜರಡಿಯನ್ನು ರೂಪಿಸಿ ಅದರ ಮೂಲಕ ಈ ಕಡೆಗಣಿಸಲ್ಪಟ್ಟ ಸಮುದಾಯಗಳನ್ನು ಗ್ರಹಿಸುತ್ತದೆ. ಆ ಪ್ರಕಾರ ನಡೆದುಕೊಳ್ಳುವಂತೆ ಮಾಡುತ್ತದೆ. ಕೋಥಿಗಳು, ಹಿಜ್ರಾಗಳು, ಮತ್ತು ಟ್ರಾನ್ಸ್‌ಜೆಂಡರ್ ಲೈಂಗಿಕ ಕಾರ್ಮಿಕರನ್ನು ಕುರಿತು ವರದಿ ಮಾಡುವಾಗ ಸ್ಥಳೀಯ ಮಾಧ್ಯಮವು (ಇಂಗ್ಲೀಷ್ ಮತ್ತು ಕನ್ನಡ ಎರಡರಲ್ಲೂ) ಅವರನ್ನು ಘೋರ, ಕೊಳಕು ಮತ್ತು ಕೆಟ್ಟವರೆಂದು ಕಾಣುವ ವಿರುದ್ಧ ಲಿಂಗಿ ( hetrosexist) ತರ್ಕದ ಮೂಲಕ ನೋಡುತ್ತದೆ. ಈ ಕೆಳಗೆ ಇತ್ತೀಚೆಗೆ ಬಂದ ಹಲವಾರು ಸುದ್ಧಿಕತೆಗಳ ವಿಶ್ಲೇಷಣೆಯನ್ನು ಕೊಡಲಾಗಿದೆ. ಅವು ಟ್ರಾನ್ಸ್‌ಜೆಂಡರ್ ಜನರ ಕುರಿತ ಮಾಧ್ಯಮದ ಮನೋಭಾವನೆಯನ್ನು ಹೊರಗೆಡುವುತ್ತವೆ. ಮುಂದಿನ ವಿಭಾಗದಲ್ಲಿ ಈ ಪ್ರತಿನಿಧಿತ್ವವು, ಸಂಘಟಿತ ಕ್ವಿಯರ್ ಸಮುದಾಯದ ಒತ್ತಾಯದಿಂದಾಗಿ ಹೇಗೆ ಸ್ವಲ್ಪ ಬದಲಾಗುತ್ತದೆ ಎಂಬುದನ್ನು ಪರೀಕ್ಷಿಸೋಣ.

### 4.4.1 ಕಳ್ಳತನ ಮತ್ತು ದರೋಡೆ ಆರೋಪಗಳ ಮೇಲೆ ಟ್ರಾನ್ಸ್‌ಜೆಂಡರ್ ಲೈಂಗಿಕ ಕಾರ್ಮಿಕರ ಬಂಧನ

2002, ಜುಲೈ 5 ರಂದು ಉಪ್ಪಾರ್‌ಪೇಟೆ ಠಾಣೆಯ ಪೋಲೀಸರು ಕಳ್ಳತನ ಮತ್ತು ದರೋಡೆಯ ಆರೋಪದ ಮೇಲೆ ನಾಲ್ಕು ಪುರುಷ ಲೈಂಗಿಕ ಕಾರ್ಮಿಕರನ್ನು ಬಂಧಿಸಿದರು. ಕದ್ದಿರುವ ಮೂರು ಲಕ್ಷ ರೂಪಾಯಿ ಮೌಲ್ಯದ ವಸ್ತುಗಳನ್ನು (ಒಡವೆ, ಹಣ ಮತ್ತು ಎಲೆಕ್ಟ್ರಾನಿಕ್ ವಸ್ತುಗಳು) ಅವರಿಂದ ವಾಪಸ್ಸು ಪಡೆಯಲಾಗಿದೆ ಎಂದು ಆಪಾದಿಸಲಾಯಿತು. ಮೆಜೆಸ್ಟಿಕ್ ಮತ್ತು ಕಬ್ಬನ್ ಪಾರ್ಕ್ ಪ್ರದೇಶಗಳಲ್ಲಿ ಜನರನ್ನು ದಾರಿಯಲ್ಲಿ ತಡೆದು, ಹೋಟೆಲ್‌ಗಳಿಗೆ ಕರೆದುಕೊಂಡು ಹೋಗಿ ಅಲ್ಲಿ ಅವರನ್ನು ದೋಚಿ, ಲೈಂಗಿಕ ಕ್ರಿಯೆಗೆ ಒತ್ತಾಯಿಸಿ ನಂತರ ಬ್ಲಾಕ್‌ಮೇಲ್ ಮಾಡುತ್ತಿದ್ದರು ಎಂದು ಪೋಲಿಸರು ಆಪಾದಿಸಿದರು. ಪೋಲೀಸರು ಈ ನಾಲ್ವರು ಲೈಂಗಿಕ ಕಾರ್ಮಿಕರ ಮೇಲೆ ಕಳ್ಳತನ ಮತ್ತು ದರೋಡೆಯ ಇಪ್ಪತ್ತು ಕೇಸುಗಳನ್ನು ದಾಖಲಿಸಿದರು ಮತ್ತು ಕಾನೂನು ಬಾಹಿರವಾಗಿ ಇಪ್ಪತ್ತೈದಕ್ಕಿಂತಲೂ ಹೆಚ್ಚಿನ ದಿನಗಳ ಕಾಲ ಪೋಲೀಸ್ ಠಾಣೆಯಲ್ಲಿರಿಸಿದರು. ಆರು ತಿಂಗಳ ನಂತರವೂ ಅವರ ಮೇಲೆ ಆರೋಪ ಪಟ್ಟಿಯನ್ನು ದಾಖಲು ಮಾಡಲಿಲ್ಲ.

ಈ ಪ್ರಕರಣ ಕುರಿತು ಇಂಗ್ಲೀಷ್ ಸುದ್ದಿ ಪತ್ರಿಕೆಗಳು (ಡೆಕ್ಕನ್ ಹೆರಾಲ್ಡ್, ದಿ ಹಿಂದೂ ಮತ್ತು ಟೈಮ್ಸ್ ಆಫ್ ಇಂಡಿಯಾ) ಹಾಗೂ ಕನ್ನಡ ಸುದ್ಧಿಪತ್ರಿಕೆಗಳು (ಪ್ರಜಾವಾಣಿ, ವಿಜಯ ಕರ್ನಾಟಕ ಮತ್ತು ಕನ್ನಡ ಪ್ರಭ) ವ್ಯಾಪಕವಾಗಿ ವರದಿ ಮಾಡಿದವು. ಆದರೆ ವರದಿಗಳು ಪೂರ್ಣವಾಗಿರಲಿಲ್ಲ. ಪೋಲೀಸ್ ಫೈಲ್‌ಗಳನ್ನೇ ಆಧರಿಸಿದ್ದವು ಮತ್ತು ಆರೋಪಿಗಳ ಹೇಳಿಕೆಯನ್ನು ಪಡೆಯುವ ಪ್ರಯತ್ನ ಮಾಡಿರಲಿಲ್ಲ. ಎಲ್ಲಕ್ಕಿಂತಲೂ ಮುಖ್ಯವಾದುದೆಂದರೆ, ಎಲ್ಲ ವರದಿಗಳು (ಟೈಮ್ಸ್‌ಆಫ್ ಇಂಡಿಯಾ ಹೊರತು ಪಡಿಸಿ) ಒಂದೇ ತರಹ, ಅಪರಾಧ ಕೃತ್ಯಗಳನ್ನು ಆರೋಪಿಗಳ ಲೈಂಗಿಕಾಭಿಮುಖತೆಗೆ ಜೋಡಿಸಿದ್ದವು. 'ಡಕಾಯಿತಿಯಲ್ಲಿ ತೊಡಗಿದ್ದ ನಾಲ್ಕು ಜನ ಪುರುಷ ಸಲಿಂಗಕಾಮಿಗಳನ್ನು ಹಿಡಿಯಲಾಗಿದೆ'' (ಡೆಕ್ಕನ್ ಹೆರಾಲ್ಡ್). ''.. .. ಆರೋಪಿಗಳು ಸಲಿಂಗಕಾಮಿಗಳು ಎನ್ನಲಾಗಿದೆ'' (ದಿ ಹಿಂದೂ): ''..ದರೋಡೆ: ಸಲಿಂಗ ಕಾಮಿಗಳ ಬಂಧನ'' (ದಿ ನ್ಯೂ ಇಂಡಿಯನ್ ಎಕ್ಸ್‌ಪ್ರೆಸ್).

ಇವು ಕೊಡುವ ಸಲಹೆ ಏನೆಂದರೆ, ಸಲಿಂಗಕಾಮದ ವರ್ತನೆಯನ್ನು ತೋರುವ ವ್ಯಕ್ತಿಗಳು ಸಹಜವಾಗಿಯೇ ಮತ್ತು ಇತರರಿಗಿಂತ ಹೆಚ್ಚಾಗಿ ಅಪರಾಧೀಯತೆಯತ್ತ ಸೆಳೆಯಲ್ಪಡುತ್ತಾರೆ: ಇಲ್ಲಿಂದ ಒಂದು ಹೆಜ್ಜೆ ಮುಂದೆ ಹೋಗಬೇಕಷ್ಟೇ, ಸಲಿಂಗ ಕಾಮವನ್ನೇ ಅಪರಾಧದ ರೂಪವಾಗಿ ರಚಿಸುವತ್ತ. ಈ ರೀತಿ ಲೈಂಗಿಕ ಅಲ್ಪಸಂಖ್ಯಾತರ ಅದರಲ್ಲೂ ವಿಶೇಷವಾಗಿ ಹಿಜ್ರಾಗಳ ಚಟುವಟಿಕೆಗಳ ಕುರಿತ ಪೋಲೀಸರ ವೃತ್ತಾಂತದಲ್ಲಿ ಅಪರಾಧ ಮತ್ತು ಸಲಿಂಗ ಕಾಮವನ್ನು ಒಂದಾಗಿ ನೋಡುವುದು ಮಾಮೂಲಿ. ನಿಜ ಹೇಳಬೇಕೆಂದರೆ ಬೆಂಗಳೂರಿನ ಪೋಲೀಸರು ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿದ್ದಾರೆ. ಎಲ್ಲ ಹಿಜ್ರಾಗಳು ಗಿರಾಕಿಗಳನ್ನು ಬೇಡಿಕೊಂಡು ನಂತರ ಅವರನ್ನು ದೋಚುವ ಉದ್ದೇಶದಿಂದಲೇ ಸೆಕ್ಸ್‌ವರ್ಕ್ ಮಾಡುತ್ತಾರೆಂದು ಆರೋಪಿಸಿ ಅಧಿಕೃತವಾಗಿ ಅವರ ಅಪರಾಧಿಕ ವಿವರಣಾ ಪಟ್ಟಿ ತಯಾರಿಸುವ ಬಗ್ಗೆ ಯೋಚಿಸುತ್ತಿದ್ದಾರೆ.

ವಿಜಯ ಕರ್ನಾಟಕ ಪತ್ರಿಕೆಯಲ್ಲಿ ''ಪೋಲೀಸ್ ಕಮೀಷನರ್ ಸಾಂಗ್ಲಿಯಾನ, ಹಿಜ್ರಾಗಳಿಗೆ ತಮ್ಮ ಕಛೇರಿಗೆ ಬಂದು ಫೋಟೊ ತೆಗೆಸಿಕೊಳ್ಳಬೇಕೆಂದು, ಬೆರಳಿನ ಗುರುತು ನೀಡಬೇಕೆಂದು

ಆದೇಶಿಸಿದ್ದಾರೆ ಮತ್ತು ಸಲಿಂಗ ಕಾಮದ ಚಟುವಟಿಕೆಗಳಲ್ಲಿ, ಅಪರಾಧಗಳಲ್ಲಿ ತೊಡಗಬಾರದೆಂದು, ವೇಶ್ಯಾವಾಟಿಕೆ ನಡೆಸಕೂಡದೆಂದು ಎಚ್ಚರಿಕೆ ನೀಡಿದ್ದಾರೆಂದು'' ವರದಿ ಮಾಡಲಾಗಿತ್ತು. ಹೀಗೆ ಸಾರಾಸಗಟಾಗಿ ಖಂಡನೆ ಮಾಡಿ, ಇಡೀ ಸಮುದಾಯವೇ ಅಪರಾಧದತ್ತ ಒಲವುಳ್ಳದ್ದೆಂದು ಗುರಿಯಾಗಿಸುವುದು ಅಪರಾಧಿ ಜನಾಂಗವೆಂಬ ವಸಾಹತುಶಾಹಿ ವಿಂಗಡಣೆಗೆ ಎಸೆಯಲ್ಪಟ್ಟಂತೆ. ಪೊಲೀಸರ ಭಾವೋದ್ರೇಕದ, ಪೂರ್ವಾಗ್ರಹ ಪೀಡಿತ ಹೇಳಿಕೆಗಳನ್ನು ಬೇರೆ ಮೂಲಗಳಿಂದ ಪರಿಶೀಲಿಸಿ ನೋಡದೆ, ಯಾವ ಟೀಕೆಯೂ ಇಲ್ಲದೆ ಒಪ್ಪಿ ಪ್ರಕಟಿಸುವುದು ದುರದೃಷ್ಟಕರ. ಇಂತಹ ಪೋಲೀಸ್ ಪ್ರೇರಿತ ವರದಿಯ ವಿರುದ್ಧ ಪಿ.ಯು.ಸಿ.ಎಲ್. ಕರ್ನಾಟಕದವರು ವಿರೋಧ ವ್ಯಕ್ತ ಪಡಿಸಿದಾಗ ಇಂಡಿಯನ್ ಎಕ್ಸ್‌ಪ್ರೆಸ್ ಪತ್ರಿಕೆಯವರು ಮಾರನೆಯ ದಿವಸ ತಪ್ಪು ಸರಿಪಡಿಸಿ ವರದಿ ಮಾಡಿದರು. ಆದರೆ ಬೇರೆ ಪತ್ರಿಕೆಗಳು ಕಡೆಗಣಿಸಿದವು.

### 4.4.2 ಚಾಂದಿನಿ ಪ್ರಕರಣ

ಬೆಂಗಳೂರಿನ ಕಮ್ಮನ ಹಳ್ಳಿಯಲ್ಲಿ ದಿನಾಂಕ 1, ಡಿಸೆಂಬರ್ 2002ರಲ್ಲಿ ಚಾಂದಿನಿ ಎಂಬ ಹಿಜ್ರಾ ತನ್ನ ಮನೆಯಲ್ಲಿ ತೀವ್ರವಾದ ಸುಟ್ಟ ಗಾಯಗಳಿಂದಾಗಿ ತೀರಿಕೊಂಡಳು. ಬಣ್ಣ ಬಳಿಯುವ ಕೆಲಸ ಮಾಡುತ್ತಿದ್ದ ಜ್ಞಾನ ಪ್ರಕಾಶ್ ಎಂಬುವವರೊಂದಿಗೆ ಆಕೆಯ ಮದುವೆಯಾಗಿತ್ತು. ಸಾಯುವ ದಿನದವರೆಗೂ 'ಆಕೆ ಹಿಜ್ರಾ ಎಂಬುದು ತನಗೆ ತಿಳಿದಿರಲಿಲ್ಲವೆಂದು, ಆತ ಹೇಳಿದ ಆತನ ಆಘಾತ, ಕೋಪ ಮತ್ತು ಅವನ ತಂದೆ ತಾಯಿಗಳಿಗೆ ಹೇಳಿ ಬಿಡುತ್ತೇನೆಂಬ ಬೆದರಿಕೆಯೇ ಆಕೆಯನ್ನು ಆತ್ಮಹತ್ಯೆಗೆ ತಳ್ಳಿದ್ದು. ಆದರೆ ಚಾಂದನಿಯನ್ನು ಬಲ್ಲ ಹಲವಾರು ಹಿಜ್ರಾಗಳು ಆತ್ಮಹತ್ಯೆಯ ಕತೆಯನ್ನು ತಳ್ಳಿ ಹಾಕಿ ಜ್ಞಾನಪ್ರಕಾಶ್‌ನ ಮೇಲೆ ಆರೋಪ ಹೊರಿಸುತ್ತಾರೆ. ಆತ ಚಾಂದನಿಯನ್ನು ಹಮಾಮಿನಲ್ಲಿ ಭೇಟಿಯಾದ, ಅವಳೊಂದಿಗೆ ಸುಧೀರ್ಘವಾದ ಸಂಬಂಧವನ್ನಿಟ್ಟುಕೊಂಡಿದ್ದ. ಹಿಜ್ರಾಗಳ ಕಾರ್ಯಕ್ರಮವೊಂದರಲ್ಲಿ ಇತರ ಹಿಜ್ರಾಗಳು ಮತ್ತು ಚಾಂದಿನಿಯೊಂದಿಗೆ ಜ್ಞಾನಪ್ರಕಾಶ ಇರುವ ವೀಡಿಯೋ ಟೇಪ್ ಸಂಗಮ ಸಂಸ್ಥೆಯವರ ಬಳಿ ಇದೆ. ಈ ಹಿಜ್ರಾಗಳು ಜ್ಞಾನಪ್ರಕಾಶನೇ ಚಾಂದಿನಿಯ ಹಣ ಮತ್ತು ಒಡವೆಗಳಿಗಾಗಿ ಕೊಲೆ ಮಾಡಿದ್ದಾನೆ ಎಂದು ಆರೋಪಿಸುತ್ತಾರೆ. ಅವರು 'ವಿವಿಧ' ಸದಸ್ಯರೊಂದಿಗೆ ಸೇರಿ ಡಿಸೆಂಬರ್ 7, 2002ರಂದು ಪ್ರತಿಭಟನೆ ನಡೆಸಿದರು. ಚಾಂದನಿಯ ಸಾವನ್ನು ಕೊಲೆ ಎಂದು ಪರಿಗಣಿಸಬೇಕೆಂದು, ನಿಷ್ಪಕ್ಷಪಾತವಾದ ತನಿಖೆ ನಡೆಸಬೇಕೆಂದು ಒತ್ತಾಯಿಸಿದರು. ಯಾವ ಬೇಡಿಕೆಗೂ ಕಿವಿಗೊಡದ ಪೊಲೀಸರು, ಆತ್ಮಹತ್ಯೆ ಎಂಬ ವರದಿಗೆ ಕಟ್ಟು ಬಿದ್ದಿದ್ದಾರೆ.

ಡಿಸೆಂಬರ್ 4, 2002ರಂದು ಮುಖ್ಯವಾದ ಇಂಗ್ಲೀಷ್ ಮತ್ತು ಕನ್ನಡ ಸುದ್ದಿ ಪತ್ರಿಕೆಗಳು ಚಾಂದನಿಯ ಸಾವು ಆತ್ಮಹತ್ಯೆ ಎಂಬ ಭಾವೋದ್ರೇಕದ ಸುದ್ದಿಯನ್ನು ಪ್ರಕಟಿಸಿದರು. ಈ ಸುದ್ದಿಯು ಸಂಪೂರ್ಣವಾಗಿ ಪೊಲೀಸರ ಹೇಳಿಕೆಯನ್ನೇ ಅವಲಂಬಿಸಿತ್ತು. ನಂತರ ಹಿಜ್ರಾಗಳು ಆಕೆಯ ಸಾವನ್ನು ಕೊಲೆ ಎಂದು ಆರೋಪಿಸಿದಾಗ, ಈ ಹೇಳಿಕೆಯನ್ನು ದಿನಾಂಕ 8, ಡಿಸೆಂಬರ್ 2002 ರಂದು ನಡೆದ ಹಿಜ್ರಾ ರ್‍ಯಾಲಿ ಕುರಿತ ವರದಿಯ ಭಾಗವಾಗಿ ಪ್ರಕಟಿಸಿದರು. ಕನ್ನಡದ ಎರಡು ಜನಪ್ರಿಯ ವಾರಪತ್ರಿಕೆಗಳಾದ ಪೋಲಿಸ್ ನ್ಯೂಸ್ ಮತ್ತು ಲಂಕೇಶ್ ಪತ್ರಿಕೆ ಕೊಳಕು ವರದಿಗಳನ್ನು ಪ್ರಕಟಿಸಿದವು. ಪೊಲೀಸ್ ನ್ಯೂಸ್‌ನಲ್ಲಿ (22.12.2002) ಇಡೀ ಪ್ರಕರಣವನ್ನು ''ಇಬ್ಬರು ವಿರುದ್ಧ ಲಿಂಗಿ ಅಪರಿಚಿತರ ನಡುವಿನ ಉದ್ರೇಕಕಾರಿ ಪ್ರಣಯ ಕಥೆಯು ಹೊಲಸು ದುಃಸ್ವಪ್ನವಾಗಿ ಪರಿಣಮಿಸಿತು. ಕುಯುಕ್ತಿಯ ಹಿಜ್ರಾಳ ಮದುವೆಯ ಬಲೆಗೆ ಬಿದ್ದ ಮುಗ್ಧ ಯುವಕನಿಗೆ ಮದುವೆಯಾದ ನಂತರವೇ ಆಕೆ ಹಿಜ್ರಾ ಎಂಬುದು ತಿಳಿಯಿತು'' ಎಂದು ಪ್ರಕಟಿಸಲಾಯಿತು.

ಸಮಾಜದ ಇತರರೆಡೆಯಂತೆ ಇಲ್ಲಿಯೂ ಸಹ ಚಾಂದಿನಿಯ ಲೈಂಗಿಕ ಮತ್ತು ಲಿಂಗಾಂತರಿ ಅಸ್ಮಿತೆಯನ್ನು ಒಂದು ಆಯ್ಕೆಯಾಗಿ ನೋಡದೆ ಮುಗ್ಧ ಗಂಡಸನ್ನು ವಶೀಕರಿಸಲು ಹೂಡಿದ ತಂತ್ರವಾಗಿ ನೋಡಲಾಯಿತು. ಹಿಜ್ರಾ ಆಗುವ ಪ್ರಕ್ರಿಯೆಯನ್ನು (ಜೈವಿಕವಾಗಿ ಗಂಡಾಗಿರುವವ ಹೆಣ್ಣಿನ ಪಾತ್ರ ವಹಿಸುವುದು) ಉಲ್ಟಾ ಮಾಡಿ ನೋಡಿದಾಗ ತಿಳಿಯುವುದೇನೆಂದರೆ -ರಹಸ್ಯ ಬದಲಾಗುವವರೆಗೂ, ಕಥೆಯು ಚಾಂದನಿಯನ್ನು ಆಕರ್ಷಕ ಯುವತಿಯಾಗಿ ಚಿತ್ರಿಸಿರುವುದು. ನಂತರ ವರದಿಗಾರರು ಆಕೆಯನ್ನು ಚಾಂದಿನಿ ಆಲಿಯಾಸ್ ನಾಜ಼ಿರ್ ಎಂಬ ಮೋಸಗಾರ ಗಂಡಸಾಗಿ ಪರಿವರ್ತಿಸಿದ್ದಾರೆ. ಚಾಂದನಿಯ ಆತ್ಮಹತ್ಯೆಯನ್ನು -ಮದುವೆ ಅಸಾಧ್ಯವಾದಾಗ ಸಾಧ್ಯವಾಗುವ ಒಂದೇ ದಾರಿ ಎಂದು ನೋಡಲಾಗಿದೆ. ಇದನ್ನೇ ಸುಟ್ಟು ಕರಕಲಾದ ಚಾಂದನಿಯ ದೇಹದ ಫೋಟೋ ಕೂಡ ಪುಷ್ಟೀಕರಿಸುತ್ತದೆ. ಈ ಒಳಸಂಚಿನ, ಬಯಲುಗೊಂಡ, ಅನಾಹುತದ ನಾಟಕೀಯ ಕಥೆಯನ್ನು ಗಂಡನ ನಿಲುವಿನಿಂದ ನಿರೂಪಿಸಲಾಗಿದೆ. ನಿರೂಪಣೆಗೆ ಜ್ಞಾನಪ್ರಕಾಶ ಸಿಗದ ಆಶಾಭಂಗವೇ ಆಧಾರವಾಗಿದೆಯೇ ಹೊರತು ಚಾಂದನಿಯ ದಾರುಣ ಸಾವಲ್ಲ. ಮುಖ್ಯ ಲೇಖನದಲ್ಲಿ ಎತ್ತಿ ಹಿಡಿದಿರುವುದು ಆತ್ಮಹತ್ಯೆ ಎಂದ ಪೋಲೀಸರ ನಿಲುವನ್ನು. ಆತ್ಮಹತ್ಯೆಯಲ್ಲ, ಕೊಲೆ ಎಂದು ಹಿಜ್ರಾಗಳು ಮಾಡಿದ ಆರೋಪವನ್ನು ಸಂಕ್ಷಿಪ್ತವಾಗಿ ಪ್ರತ್ಯೇಕ ಬಾಕ್ಸ್ ಐಟಂ ಆಗಿ ವರದಿ ಮಾಡಲಾಗಿದೆ; ಹಿಜ್ರಾಗಳು ತನಿಖೆ ಮುಂದುವರೆಸಬೇಕೆಂದು ಪೋಲೀಸ್ ಇಲಾಖೆಯ ಮೇಲೆ ಅನಗತ್ಯ ಒತ್ತಡ ಹಾಕಲು ಪ್ರಯತ್ನಿಸುತ್ತಿದ್ದಾರೆಂಬ ಸಲಹೆಯೂ ಲೇಖನದಲ್ಲಿತ್ತು. ಇಲ್ಲಿ ನಿಜವಾಗಿಯೂ ಪೋಲೀಸರ ಜವಾಬ್ದಾರಿ ಏನೆಂದರೆ ಹೆಂಡತಿ ಸುಟ್ಟ ಗಾಯಗಳಿಂದ ಸತ್ತಿರುವುದನ್ನ ಅಸಹಜ ಸಾವು ಎಂದು ಪರಿಗಣಿಸಿ ತನಿಖೆ ಮುಂದುವರೆಸುವುದು. ಇಂತಹ ತನಿಖೆ ಮಾಡುವುದನ್ನು ಪೋಲೀಸರು ಇಲ್ಲಿಯವರೆಗೂ ನಿರಾಕರಿಸಿದ್ದಾರೆ.

ಲಂಕೇಶ್ ಪತ್ರಿಕೆಯಲ್ಲಿ ದಿನಾಂಕ 18.12.2002ರಂದು ಆರ್.ಸೋಮನಾಥ್‌ರವರು ಪೋಲೀಸ್ ನ್ಯೂಸ್‌ನಲ್ಲಿ ಚಾಂದನಿ ಪ್ರಕರಣ ಕುರಿತು ಬರೆದಿರುವ ಹಲವು ವಿಷಯಗಳನ್ನೇ ಪುನಃ ಹೇಳಿದ್ದಾರೆ. ಹೀಗೆ ಸಾವನ್ನು ಆತ್ಮಹತ್ಯೆ ಎಂದ ಪೋಲೀಸರ ನಿಲುವನ್ನೇ ಬೆಂಬಲಿಸಲಾಗಿದೆ ನಿಷ್ಪಕ್ಷಪಾತ ತನಿಖೆ ನಡೆಸಬೇಕೆಂಬ ಹಿಜ್ರಾಗಳ ಬೇಡಿಕೆಯನ್ನು ಪ್ರತಿಭಟನೆಯ ಅಭಿವ್ಯಕ್ತಿ ಎಂದು ನೋಡದೆ ಪೋಲೀಸರ ಕರ್ತವ್ಯಕ್ಕೆ ಅಡ್ಡಿಪಡಿಸುವ ಬೆದರಿಕೆ ಎಂಬಂತೆ ನೋಡಲಾಗಿದೆ ಮತ್ತು ಹಿಜ್ರಾ ಸಮುದಾಯವನ್ನು ಮದುವೆಯ ಬಲೆಗೆ ಗಂಡಸರನ್ನು ಬೀಳಿಸಿಕೊಳ್ಳುವವರು, ತಮ್ಮ ಲೈಂಗಿಕಾಭಿಮುಖತೆಯ ಬಗ್ಗೆ ಸ್ಪಷ್ಟತೆ ಇಲ್ಲದೆ ಲಿಂಗ ಬದಲಾವಣೆಯ ಶಸ್ತ್ರ ಚಿಕಿತ್ಸೆ ಮಾಡಿಸಿಕೊಳ್ಳುವವರೆಂಬಂತೆ ಪ್ರತಿನಿಧಿಸಲಾಗಿದೆ. ಲಂಕೇಶ್‌ಪತ್ರಿಕೆಯ ವರದಿಯು ಇನ್ನೂ ಮುಂದುವರೆದು ಹಿಜ್ರಾಗಳನ್ನು ಪ್ರತ್ಯೇಕ ಜನಾಂಗ, ಭೂಗತ ಜಗತ್ತಿನ ವಿಲಕ್ಷಣ ಜೀವಿಗಳು ಅರ್ದ ಪುರುಷ ಅರ್ದ ಸ್ತ್ರೀ, ಆಚರಣೆಯಲ್ಲಿ ನಡವಳಿಕೆಯಲ್ಲಿ ಅಂತರ ಪಿಶಾಚಿಗಳೆಂದು ಚಿತ್ರಿಸಿದ ಈ ಲೇಖನಕ್ಕೆ ಸಂಗಮದವರು ಪ್ರತಿಕ್ರಿಯೆಯನ್ನು ಬರೆದು ಲೇಖನವು ಕಳಂಕರಪೂರಿತವಾಗಿದೆ ಟ್ರಾನ್ಸ್‌ಜೆಂಡರ್ ಜನರ ಮೇಲೆ ಬೆಳಕು ಚೆಲ್ಲುವುದಕ್ಕಿಂತ ಲೇಖಕರಿಗೆ ಸಲಿಂಗ ಕಾಮಿಗಳ ಮತ್ತು ಲಿಂಗಾಂತರಿಗಳ ಬಗ್ಗೆ ಇರುವ ಅಸಹ್ಯ ಮನೋಭಾವನೆಯನ್ನು ಹಾಗೂ ಟ್ರಾನ್ಸ್‌ಜೆಂಡರ್ ಅಸ್ಮಿತೆ ಕುರಿತ ಅವರ ಗೊಂದಲ, ಅಜ್ಞಾನವನ್ನು (ಪದೇ ಪದೇ ಅವರನ್ನು ಸ್ತ್ರೀಲಿಂಗ ಪುರುಷಲಿಂಗಗಳಲ್ಲಿ ಸಂಭೋಧಿಸಿದ್ದಾರೆ) ಹಾಗು ಉಗ್ರ ಲೈಂಗಿಕ ನೈತಿಕತೆಯನ್ನು ತೋರಿಸುತ್ತದೆ ಎಂದು ತಿಳಿಸಿದರು.

ಪ್ರಾದೇಶಿಕ ಮಾಧ್ಯಮಗಳು, ಲೇಖನಗಳಲ್ಲಿ ಲೈಂಗಿಕತೆ ಅಲ್ಪಸಂಖ್ಯಾತರನ್ನು ಕುರಿತ

ವಿವರಿಸುವಾಗ ಹಲವಾರು ಹೀನಾಯ ಗುಣವಾಚಕಗಳನ್ನು ಆರಾಮವಾಗಿ ಬಳಸುತ್ತವೆ. ಸಲಿಂಗಕಾಮಿಗಳಿಗೆ 'ಖೋಜಾ', 'ಚಕ್ಕ', 'ಗಾಂಡು' ಎಂದು 'ಶಿಖಂಡಿ' 'ನಪುಂಸಕ ಇತ್ಯಾದಿಯಾಗಿ ಕರೆಯಲಾಗಿದೆ. ಸಾಮಾನ್ಯವಾಗಿ 'ಶಿಖಂಡಿ' ಎಂದು ಬಳಸುವುದನ್ನು ಇಲ್ಲಿ ವಿಶೇಷವಾಗಿ ಪರಿಗಣಿಸಲಾಗಿದೆ. ಈ ಪದವು ಲಿಂಗ ಮತ್ತು ಲೈಂಗಿಕ ಅಸ್ಮಿತೆ ಕುರಿತ ಪ್ರಾಚೀನ ಮತ್ತು ಪಿತೃಪ್ರಧಾನ ಕಲ್ಪನೆಯನ್ನು ಆಧರಿಸಿದೆ. ಈ ಕಲ್ಪನೆಯು ಸಂಪೂರ್ಣವಾಗಿ ಕುಡಿಯೊಡೆದಿರುವುದು, ಪುರುಷತ್ವ ಮತ್ತು ಲೈಂಗಿಕ ಸಾಮರ್ಥ್ಯವನ್ನು ನಿಯಮವಾಗಿ ನೋಡುವ ಮೂಲದಿಂದ. ಇಂತಹ ಕಲ್ಪನೆಗಳಿರುವಾಗ ಹೆಣ್ಣೆಂಬ ಅಸ್ಮಿತೆಯನ್ನು ಅಪ್ಪಿಕೊಳ್ಳುವ ಸಲುವಾಗಿ SRS ಶಸ್ತ್ರ ಚಿಕಿತ್ಸೆಗೆ ಒಳಗಾಗುವ ಹಿಜ್ರಾಗಳ ಪರಿಸ್ಥಿತಿಯು ವಿಕಾರ ನಿರ್ವೀಯತೆ ಎನಿಸಿಕೊಳ್ಳುತ್ತದೆ. ಮತ್ತೆ ಲೇಖಕರು ಅಸಹ್ಯ ಭ್ರಮೆಯಿಂದ ಹಲವು ಮದುವೆಗಳಲ್ಲಿ ಗಂಡಸರು ತನ್ನ ಹಿಜ್ರಾ ಸಂಗಾತಿಯ ಸಂಪಾದನೆಯಲ್ಲಿ ಬದುಕುತ್ತಾರೆ ಎಂದು ವಿವರಿಸುತ್ತಾರೆ. ಇಂತಹ ಶೋಷಣೆ ಹಿಜ್ರಾ ಸಮುದಾಯಕ್ಕೆ ವಿಶೇಷವಾದುದು, ವಿರುದ್ಧ ಲಿಂಗಿಗಳ ಮದುವೆಯಲ್ಲಿ ಇಲ್ಲವೆಂಬಂತೆ ಬರೆದಿದ್ದಾರೆ. ಮೂಲಭೂತವಾಗಿ ಲೇಖನವು ಹೊರಗೆಡವುದು ವಿರುದ್ಧಲಿಂಗಿ ಹಾಗೂ ಪಿತೃಪ್ರಧಾನ ನೈತಿಕತೆ ವ್ಯವಸ್ಥೆಯನ್ನು ಒಪ್ಪಿಕೊಳ್ಳದ, ಲೈಂಗಿಕತೆ ಅಲ್ಪಸಂಖ್ಯಾತರೊಳಗಿನ ಸಂಬಂಧಗಳ ಮತ್ತು ಅಸ್ಮಿತೆಗಳ ಸಂಕೀರ್ಣತೆಯನ್ನು ಒಪ್ಪಿಕೊಳ್ಳದ ಲೇಖಕರ ಅಸಾಮರ್ಥ್ಯತೆಯನ್ನು. ಪೋಲೀಸರ ನಿಲುವನ್ನು ಆಧರಿಸಿದ ಇಂತಹ ಕೆಟ್ಟ, ಪೂರ್ವಾಗ್ರಹ ಪೀಡಿತ ಲೇಖನವು ಪ್ರಗತಿಪರ, ವ್ಯವಸ್ಥೆ ವಿರೋಧಿ ಎನಿಸಿಕೊಳ್ಳುವ ಲಂಕೇಶ ಪತ್ರಿಕೆಯಲ್ಲಿ ಪ್ರಕಟವಾದುದು ನಿಜಕ್ಕೂ ವಿಪರ್ಯಾಸ. ಲೈಂಗಿಕತೆ ಅಲ್ಪಸಂಖ್ಯಾತರ ವಿಷಯ ಪ್ರಚಾರಗೊಂಡಿದ್ದರೂ, ವಿಷಯದ ಕುರಿತು ತಮ್ಮದೇ ಆಸಕ್ತಿ ಬೆಳಸಿಕೊಂಡಿದ್ದರೂ ಮಾಧ್ಯಮವೂ ಲಿಂಗ ರೂಢಿಗತಗಳು ಮತ್ತು ವಿರುದ್ಧಲಿಂಗಿ ತತ್ವದ ಹಿಡಿತದೊಳಗಿವೆ ಎನಿಸುತ್ತದೆ.

ಅಧ್ಯಾಯ 5

# ಬೆಂಗಳೂರಿನಲ್ಲಿ ಸಂಘಟಿತರಾಗುತ್ತಿರುವ ಕೋಥಿ
# ಮತ್ತು ಹಿಜ್ರಾ ಲೈಂಗಿಕ ಕಾರ್ಮಿಕರು

ಕ್ವಿಯರ್ ಹಕ್ಕುಗಳ ಗುಂಪುಗಳ ಮಧ್ಯ ಪ್ರವೇಶಿಕೆಯಿಂದಾಗಿ ಕೋಥಿ ಹಾಗು ಹಿಜ್ರಾ ಸಮುದಾಯವು ರಾಜ್ಯ ಮತ್ತು ಸಮಾಜದ ತಾರತಮ್ಯದ ವಿರುದ್ಧ ಸಂಘಟಿತರಾಗುವ ಕೆಲಸಕ್ಕೆ ಮುಂದಾಯಿತು. ಅವರು ತಮ್ಮನ್ನು ಸಂಘಟಿಸಿಕೊಳ್ಳುವ ಸಲುವಾಗಿ ಕೈಗೊಂಡ ಹಲವಾರು ಕಾರ್ಯತಂತ್ರಗಳನ್ನು ಈ ಅಧ್ಯಾಯದಲ್ಲಿ ಕಾಣಬಹುದು. ಆ ಕಾರ್ಯತಂತ್ರಗಳು ಹೀಗಿವೆ.

* ಕೋಥಿ ಮತ್ತು ಹಿಜ್ರಾ ಸಮುದಾಯದ ಕಲೆಕ್ಟಿವ್‌ನ ರಚನೆ
* ಹಿಂಸೆಯ ಸಂದರ್ಭಗಳಲ್ಲಿ ಆಪತ್ಕಾಲದ ಮಧ್ಯಸ್ಥಿಕೆ
* ಮಾದ್ಯಮಗಳ ಮೂಲಕ ಪ್ರಚಾರ

## *5.1 ಕೋಥಿ ಮತ್ತು ಹಿಜ್ರಾ ಲೈಂಗಿಕ ಕಾರ್ಮಿಕರ ಸಮುದಾಯ ಮತ್ತು ಬಡ/ಇಂಗ್ಲೀಷ್ ಮಾತನಾಡದ ಲೈಂಗಿಕತೆ ಅಲ್ಪಸಂಖ್ಯಾತರಿಂದ ಕಲೆಕ್ಟಿವ್‌ನ ರಚನೆ:*

ಕೋಥಿ, ಹಿಜ್ರಾ ಹಾಗು ಪುರುಷ ಲೈಂಗಿಕ ಕಾರ್ಮಿಕರನ್ನು ಸಂಘಟಿಸುವ ಕಾರ್ಯದಲ್ಲಿ 'ಸಂಗಮ' ಸಂಸ್ಥೆಯು ಮುಖ್ಯ ಪಾತ್ರ ವಹಿಸಿದೆ. ಸಂಗಮ ಲೈಂಗಿಕತೆ ಅಲ್ಪಸಂಖ್ಯಾತರ ಹಕ್ಕುಗಳಿಗಾಗಿ ಕೆಲಸ ಮಾಡುತ್ತಿದೆ. ಪ್ರಾರಂಭದಲ್ಲಿ, ಲೈಂಗಿಕತೆ ಕುರಿತು ಸಂಶೋಧನೆ ಮಾಡುವವರಿಗೆ Documentation ಸೌಲಭ್ಯ ಒದಗಿಸುವುದು, ಲೈಂಗಿಕತೆ ಅಲ್ಪಸಂಖ್ಯಾತರಿಗೆ ಕೌನ್ಸಿಲಿಂಗ್ ಸೇವೆ ನೀಡುವುದಕ್ಕೆ ಮಾತ್ರ ಸೀಮಿತಿವಾಗಿತ್ತು. ಜೊತೆಗೆ ಲೈಂಗಿಕ ಅಲ್ಪಸಂಖ್ಯಾತರನ್ನು ಕುರಿತು ಸಾರ್ವಜನಿಕರೊಂದಿಗೆ ಸಂವಾದ ಪ್ರಾರಂಭಿಸಲು ಸಿನಿಮಾ ಪ್ರದರ್ಶನ ಮತ್ತು ಉಪನ್ಯಾಸ/ಚರ್ಚೆಗಳನ್ನು ಸಹ ಏರ್ಪಡಿಸಲಾಗುತ್ತಿತ್ತು. ಸಂಗಮ ಸಂಸ್ಥೆಗೆ ಮೊದಲಿಗೆ ಬೆಂಬಲ ದೊರೆತ್ತಿದ್ದು ಇಂಗ್ಲೀಷ್ ಮಾತನಾಡುವ ಸಾಮಾಜಿಕ ಕಾರ್ಯಕರ್ತರು ಮತ್ತು ಲೈಂಗಿಕತೆ ಅಲ್ಪಸಂಖ್ಯಾತರಿಂದಲೇ. ಅವರಿಗೆ ಕೋಥಿಗಳು ಮತ್ತು ಹಿಜ್ರಾಗಳು ಮತ್ತು ಟ್ರಾನ್ಸ್‌ಜೆಂಡರ್ ಲೈಂಗಿಕ ಕಾರ್ಮಿಕರೊಂದಿಗೆ ಸಂಪರ್ಕವಿರಲಿಲ್ಲ. ಲಿಂಗ, ಜಾತಿ, ವರ್ಗ ಮತ್ತು ಭಾಷೆಯ ಹಿನ್ನೆಲೆಗಳು ಹಾಗು ಇತರೆ ಆಂತರಿಕ ವ್ಯತ್ಯಾಸಗಳನ್ನು ಪರಿಗಣಿಸದೆ ಲೈಂಗಿಕತೆ ಅಲ್ಪಸಂಖ್ಯಾತರನ್ನು ಅವರ ಹಕ್ಕುಗಳನ್ನು ಪಡೆದುಕೊಳ್ಳಲು ಸಂಘಟಿಸುವುದು ಕಷ್ಟವೆಂಬುದು ಸಂಗಮ ಮತ್ತು ಇತರ ಬೆಂಬಲ ಗುಂಪುಗಳಿಗೆ ಮನವರಿಕೆಯಾದಾಗ ಪರಿಸ್ಥಿತಿ ಬದಲಾಯಿತು. ಹಾಗಾಗಿ ಆರ್ಥಿಕವಾಗಿ ಹಾಗು ಸಾಂಸ್ಕೃತಿಕವಾಗಿ ಅವಕಾಶವಂಚಿತರಾದ ಲೈಂಗಿಕತೆ ಅಲ್ಪಸಂಖ್ಯಾತರ ವಿಶೇಷವಾಗಿ ಕೋಥಿ, ಟ್ರಾನ್ಸ್‌ಜೆಂಡರ್ ಮತ್ತು ಹಿಜ್ರಾ

ಲೈಂಗಿಕ ಕಾರ್ಮಿಕರು ಎದುರಿಸುವ ಸವಾಲುಗಳತ್ತ ಹೆಚ್ಚಿನ ಗಮನವನ್ನು ನೀಡಲಾಯಿತು.

ಸಂಗಮದ ಸಂಪರ್ಕ ಹೊಂದಿದ್ದ ಕೆಲವು ಕೋಥಿಗಳು ಮತ್ತು ಹಿಜ್ರಾಗಳಿಂದ ಸಂಘಟಿಸುವ ಮೊದಲ ಪ್ರಯತ್ನ ಪ್ರಾರಂಭವಾಯಿತು. ಇಂಗ್ಲೀಷ್ ಮಾತನಾಡದ ಲೈಂಗಿಕತೆ ಅಲ್ಪಸಂಖ್ಯಾತರಿಗಾಗಿ 'ಸ್ನೇಹಾಶ್ರಯ'ವನ್ನು ಪ್ರಾರಂಭಿಸಲಾಯಿತು. ಈ ಸಣ್ಣ ಗುಂಪು ಸಂಗಮದ ಕಛೇರಿಯಲ್ಲಿ ಸಭೆ ಸೇರುತ್ತಿತ್ತು. ಜೂನ್ 2000ದಲ್ಲಿ ಕೋಥಿಯೊಬ್ಬರನ್ನು ಕಳ್ಳತನದ ಸುಳ್ಳು ಆರೋಪ ಹೊರಿಸಿ 8 ದಿನಗಳ ಕಾಲ ಲಾಕಪ್ಪಿನಲ್ಲಿ ಕಾನೂನು ಬಾಹಿರವಾಗಿ ಇಡಲಾದ ಸಂದರ್ಭದಲ್ಲಿ ಸಭೆ ಸೇರುವುದು ನಿಂತು ಹೋಯಿತು. ಬೆಂಗಳೂರಿನಲ್ಲಿರುವ ಕೋಥಿಗಳ ವಿವರ ಸಂಗ್ರಹಿಸಲು ಡೈರಿಯನ್ನು ವಶಕ್ಕೆ ತೆಗೆದುಕೊಂಡ ಪೋಲೀಸರು 'ಸ್ವಚ್ಛಗೊಳಿಸುವ' ಮಾಮೂಲಿ ಕೆಲಸ ಪ್ರಾರಂಭಿಸಿದರು. ಲೈಂಗಿಕತೆ ಅಲ್ಪಸಂಖ್ಯಾತರನ್ನು ಹುಡುಕಿ ಥಳಿಸಿ, ಕಾನೂನು ಬಾಹಿರವಾಗಿ ಲಾಕಪ್ಪಿನಲ್ಲಿಟ್ಟು, ಹಣ ಕಿತ್ತುಕೊಳ್ಳುವುದೇ ಸ್ವಚ್ಛಗೊಳಿಸುವ ಕೆಲಸ. ಪೋಲೀಸರ ಈ ಕಾರ್ಯದಿಂದ, ಬೆಂಗಳೂರಿನ ಲೈಂಗಿಕತೆ ಅಲ್ಪಸಂಖ್ಯಾತರ ಸಮುದಾಯ ಆಘಾತಗೊಂಡು 'ಸ್ನೇಹಾಶ್ರಯ' ನಿಂತು ಹೋಯಿತು. ಅದರ ಸದಸ್ಯರುಗಳು ಬಂಧನಕ್ಕೊಳಗಾಗುವ ಭೀತಿಯಿಂದ ಸಂಗಮದಿಂದ ದೂರ ಉಳಿದರು. ಸಂಗಮವೂ ಕೂಡ ಕೆಲ ಕಾಲ ಪೋಲೀಸರ ಕೆಂಗಣ್ಣಿಗೆ ಗುರಿಯಾಗಬೇಕಾಯಿತು. ಈ ಅನುಭವ ಕಲಿಸಿಕೊಟ್ಟ ಪಾಠವೇನೆಂದರೆ –ಪರಿಣಾಮಕಾರಿಯಾದ ಆಪತ್ಕಾಲಿನ ಮಧ್ಯಸ್ಥಿಕೆಯ ವ್ಯವಸ್ಥೆ ಇಲ್ಲದಿರುವ ಸಂದರ್ಭದಲ್ಲಿ, ಆಗಷ್ಟೇ ಕಣ್ಣು ಬಿಡುತ್ತಿರುವ ಚಳುವಳಿಯನ್ನು ಮುಗಿಸುವುದು ಪೋಲೀಸರಿಗೆ ಸುಲಭದ ಕೆಲಸವೆಂದು.

ಪ್ರಾರಂಭದ ಪ್ರಯತ್ನಗಳು ವಿಫಲಗೊಂಡರು ಹಲವು ಕೋಥಿಗಳು, ಹಿಜ್ರಾಗಳು, ಟ್ರಾನ್ಸ್‌ಜೆಂಡರ್‌ಗಳು ಸಂಘಟಿಸುವ ಪ್ರಯತ್ನವನ್ನು ಕೈ ಬಿಡದೆ ಮುಂದುವರೆಸಿದರು. ಆ ಪ್ರಯತ್ನದ ಫಲವಾಗಿ ಫೆಬ್ರವರಿ 2002ರಲ್ಲಿ ಬಡ ಹಾಗೂ ಇಂಗ್ಲೀಷ್ ಮಾತನಾಡದ ಲೈಂಗಿಕತೆ ಅಲ್ಪಸಂಖ್ಯಾತರಿಗಾಗಿ ಸಂಗಮದ ಕಛೇರಿಯಲ್ಲಿ ಭಾನುವಾರದ ಡ್ರಾಪ್-ಇನ್ ಸೆಂಟರನ್ನು ಪ್ರಾರಂಭಿಸಲಾಯಿತು. ಮೊದಲ ಸಭೆಯಲ್ಲಿ ಭಾಗವಹಿಸಿದ್ದ 40 ಜನರಲ್ಲಿ ಅರ್ಧಕ್ಕಿಂತ ಹೆಚ್ಚಿನವರು ಪುರುಷ ಲೈಂಗಿಕ ಕಾರ್ಮಿಕರು. ಮುಂದಿನ ದಿನಗಳಲ್ಲಿಯೂ ಸಭೆ ಮುಂದುವರೆಯಿತು. ಸಭೆಯಲ್ಲಿ ಭಾಗವಹಿಸಿದವರು ತಮ್ಮನ್ನು ಕೋಥಿಗಳು ಅಥವ ಡಬ್ಬಲ್ ಡೆಕ್ಕರ್‌ಗಳೆಂದು, ಬೈ ಸೆಕ್ಷುವಲ್‌ಗಳೆಂದು ಗುರುತಿಸಿಕೊಂಡರು. ಅವರಲ್ಲಿ ಸಾಮಾನ್ಯವಾಗಿ ಐದರಿಂದ ಹತ್ತು ಜನರು ಮುಸ್ಲಿಂಮರು, ಕೆಲವರಿಗೆ ಕನ್ನಡ ಅರ್ಥವಾಗುತ್ತಿರಲಿಲ್ಲ. ಗುಂಪಿನಲ್ಲಿ ಒಬ್ಬರು ಅಥವ ಇಬ್ಬರು ಉತ್ತರ ಭಾರತದವರು. ಹಾಗಾಗಿ ಬಹುಪಾಲು ಸಭೆಗಳನ್ನು ಕನ್ನಡ ಮತ್ತು ಹಿಂದಿ/ಉರ್ದುವಿನಲ್ಲಿ ನಡೆಸಲಾಗುತ್ತಿತ್ತು. ಪ್ರಾರಂಭದ ಹಂತದಲ್ಲಿ ಭಾನುವಾರದ ಡ್ರಾಪ್ ಇನ್ ಸೆಂಟರ್ ಅವರಿಗೆ ತಮ್ಮಂತಹವರನ್ನೇ ಭೇಟಿಯಾಗುವ, ತಮ್ಮ ಭಾವನೆಗಳನ್ನು, ಸಮಸ್ಯೆಗಳನ್ನು ಹಂಚಿಕೊಳ್ಳುವ ಸ್ಥಳವಾಯಿತು. ಮುಂದೆ ನಿಧಾನವಾಗಿ ಸಮಾಜ ಮತ್ತು ಪೋಲೀಸರಿಂದ ಅನುಭವಿಸುವ ದೌರ್ಜನ್ಯವನ್ನು, ಅದರ ಕಾರಣಗಳನ್ನು ಅರ್ಥ ಮಾಡಿಕೊಳ್ಳುವುದು ಮತ್ತು ಲೈಂಗಿಕತೆ ಅಲ್ಪಸಂಖ್ಯಾತರಾಗಿ ಅವರಿಗಿರುವ ಹಕ್ಕುಗಳ ಕುರಿತು ಅರಿವು ಬೆಳೆಸಿಕೊಳ್ಳುವುದರತ್ತ ಗಮನ ನೀಡಲಾಯಿತು.

ಸಂಗಮ ಸಂಸ್ಥೆಯು ಸಲಿಂಗಕಾಮಿ/ದ್ವಿಲಿಂಗಕಾಮಿ ಪುರುಷರು ಮತ್ತು ಕೋಥಿಗಳಿಗೆ ಹಾಗು ಹಿಜ್ರಾ ಮತ್ತು ಕೋಥಿಗಳಿಗಾಗಿಯೂ ಎರಡು ಔಟ್‌ರೀಚ್ ಯೋಜನೆಗಳನ್ನು ಪ್ರಾರಂಭಿಸಿತು. ಈ ಯೋಜನೆಗಳು ಸಂಘಟಿಸುವ ಕೆಲಸಕ್ಕೆ ಅಡಿಪಾಯವಾಯಿತು. ಈ ಯೋಜನೆಯಡಿ ತರಬೇತಿ ಹೊಂದಿದ ಫೀಲ್ಡ್ ವರ್ಕರ್‌ಗಳು ಪಾರ್ಕುಗಳು ಮತ್ತು ಕ್ರೂಸಿಂಗ್ ಸ್ಥಳಗಳಿಗೆ ಹೋಗಿ ಲೈಂಗಿಕತೆ

ಅಲ್ಪಸಂಖ್ಯಾತರನ್ನು ಸಂಪರ್ಕಿಸಿ ಅವರ ಸಮಸ್ಯೆಗಳನ್ನು ಕೇಳಿಸಿಕೊಳ್ಳುವ, ಅವಶ್ಯಕತೆ ಬಿದ್ದಾಗ ಅವರ ಪರವಾಗಿ ಪೊಲೀಸರೊಂದಿಗೆ ಮಧ್ಯಸ್ಥಿಕೆ ವಹಿಸುವ ಕೆಲಸವನ್ನು ಮಾಡುತ್ತಿದ್ದರು.

ಈ ಔಟ್‌ರೀಚ್ ಯೋಜನೆಗಳಿಂದಾಗಿ ಹೆಚ್ಚಿನ ಸಂಖ್ಯೆಯಲ್ಲಿ ಹಿಜ್ರಾಗಳು ಮತ್ತು ಕೋಥಿಗಳೊಂದಿಗೆ ಸಂಪರ್ಕ ಬೆಳೆಸಲು ಸಾಧ್ಯವಾಯಿತು. ಕಾನುನು ಸಲಹೆ, ಕೌನ್ಸಿಲಿಂಗ್ ಮತ್ತು ಇತರ ರೀತಿಯ ಸಹಾಯ ಕೋರಿ ನಿಯಮಿತವಾಗಿ ಸಂಗಮ ಕಛೇರಿಗೆ ಭೇಟಿ ನೀಡತೊಡಗಿದರು. (ನಿತ್ಯವೂ ಅಂದಾಜು ಹತ್ತು ಮಂದಿ) ಇದೇ ಸಮಯದಲ್ಲಿ ಸಂಗಮ ತನ್ನ ಕಛೇರಿಯನ್ನು ಇನು ಹೆಚ್ಚು ಅನುಕೂಲಕರವಾದ ಶಿವಾಜಿನಗರದ ಬಸ್ ನಿಲ್ದಾಣದ ಬಳಿಗೆ ಬದಲಾಯಿಸಿತು. ಇಲ್ಲಿಂದ ಬೆಂಗಳೂರಿನ ಯಾವುದೇ ಭಾಗಕ್ಕೆ ಬಸ್ ಸೌಕರ್ಯವಿದೆ. ಅಲ್ಲದೆ ನಗರದ ಕ್ರೂಸಿಂಗ್ ಸ್ಥಳಕ್ಕೂ , ಲೈಂಗಿಕತೆ ಅಲ್ಪಸಂಖ್ಯಾತರಿಗೆ ಕಿರುಕುಳ ನೀಡುವುದಕ್ಕೆ ಹೆಸರಾದ ಪೊಲೀಸ್ ಠಾಣೆಗೂ ಸಹ ಹತ್ತಿರವಾಗಿದೆ. ಇದರಿಂದ ಆಪತ್ಕಾಲದಲ್ಲಿ ಮಧ್ಯಪ್ರವೇಶಿಸುವುದು ಸಾದ್ಯವಾಯಿತು. ಸಲಿಂಗ ಕಾಮಿಗಳು, ದ್ವಿಲಿಂಗ ಕಾಮಿಗಳು, ಕೋಥಿ ಮತ್ತು ಹಿಜ್ರಾ ಲೈಂಗಿಕ ಕಾರ್ಮಿಕರು ಮತ್ತು ಲೆಸ್ಬಿಯನ್ನರಿಗೆ ವಕೀಲ ಸ್ನೇಹಿತರ ಮೂಲಕ ಉಚಿತ ಕಾನೂನಿನ ಸೇವೆ ಒದಗಿಸುವ ಸೌಲಭ್ಯವನ್ನು ಪ್ರಾರಂಭಿಸಲಾಯಿತು. ಪೊಲೀಸರು ಬಂಧಿಸಿದಾಗ, ಕುಟುಂಬದವರೊಂದಿಗಿನ ಸಂಧಾನಕ್ಕೆ ಹಾಗು ಇತರೆ ರೀತಿಯ ಬೆಂಬಲ ಬೇಕಾದಂತಹ ಸಂದರ್ಭದಲ್ಲಿ ಕಾನೂನಿನ ಸಹಾಯ ವಿಶೇಷವಾಗಿ ಬೇಕಾಗುತ್ತಿತ್ತು.

ಭಾನುವಾರದ ಸಭೆಗಳಲ್ಲಿ ಕೋಥಿ ಮತ್ತು ಹಿಜ್ರಾ ಲೈಂಗಿಕ ಕಾರ್ಮಿಕರು ಪೊಲೀಸರಿಂದ ಅನುಭವಿಸುವ ಅತೀವ ಕಿರುಕುಳ ಮತ್ತು ಹಿಂಸೆಯನ್ನು ಕುರಿತು ಪದೇ ಪದೇ ಹೇಳುತ್ತಿದ್ದರು. ಈ ವಿಷಯ ಕೂಡ ಸಂಘಟಿಸುವ ಕೆಲಸಕ್ಕೆ ಸಹಾಯಕವಾಯಿತು. ಈ ನಿಟ್ಟಿನಲ್ಲಿ ಲೈಂಗಿಕ ಕಾರ್ಮಿಕರ ಚಳುವಳಿಯೊಂದಿಗೆ ಲೈಂಗಿಕತೆ ಅಲ್ಪಸಂಖ್ಯಾತರ ಹಕ್ಕುಗಳಿಗಾಗಿ ನಡೆಸುವ ಹೋರಾಟವನ್ನು ಬೆಸೆಯುವುದು ಮುಖ್ಯವಾಯಿತು. ಹಾಗಾಗಿ ಮಹಿಳಾ ಲೈಂಗಿಕ ಕಾರ್ಮಿಕರ ಹಕ್ಕುಗಳಿಗಾಗಿ ಕೆಲಸ ಮಾಡುತ್ತಿರುವ ಡಿಸ್ಕ್, ವಿಮೋಚನ, ಸಂರಕ್ಷ, ನೆಲೆ, ಎ.ಎಲ್.ಎಫ್ ಮತ್ತು ಡಿ.ಎಂ.ಸಿ., ಯಂತಹ ಸಂಸ್ಥೆಗಳೊಂದಿಗೆ ಕೆಲಸ ಮಾಡುವುದು ಅವಶ್ಯಕವಾಯಿತು. ಈ ಗುಂಪುಗಳು ಮತ್ತು ಸಂಗಮದ ಪ್ರತಿನಿಧಿಗಳು, ಲೈಂಗಿಕ ಕಾರ್ಮಿಕರ ಮೇಲೆ ಪೊಲೀಸರಿಂದ ಆಗುತ್ತಿರುವ ಹಿಂಸೆ ಕುರಿತ ಮನವಿ ಪತ್ರವನ್ನು ಆಗಸ್ಟ್ 2002ರಲ್ಲಿ ಅಂದಿನ ಮುಖ್ಯಮಂತ್ರಿ ಎಸ್.ಎಂ. ಕೃಷ್ಣರವರಿಗೆ ಸಲ್ಲಿಸಿದರು. ಈ ಗುಂಪುಗಳು ಲೈಂಗಿಕ ದುಡಿಮೆಯ ವಿಷಯವನ್ನು ಪರಿಗಣಿಸುವ ಮತ್ತು ಇತರ ಸಮಾಜಿಕ ಚಳವಳಿಗಳೊಳಗೆ ಲೈಂಗಿಕ ಕಾರ್ಮಿಕರ ಕಾಳಜಿಯನ್ನು ಬೆಳಕಿಗೆ ತರಲು 'ಫೋರಂ ಫಾರ್ ಸೆಕ್ಸ್ ವರ್ಕರ್ಸ್ ರೈಟ್ಸ್' ಎಂಬ ವೇದಿಕೆಯನ್ನು ಪ್ರಾರಂಭಿಸಿದವು. ಈಗ ಈ ವೇದಿಕೆಯು ಲೈಂಗಿಕ ಕಾರ್ಮಿಕರನ್ನು ಅಪರಾಧೀಕರಣಕ್ಕೆ ಒಳಪಡಿಸುವ ITPA ಯಂತಹ ಕಾಯ್ದೆಯ ವಿರುದ್ಧ ಆಂದೋಲನ ನಡೆಸುತ್ತಿದೆ. ದಿನಾಂಕ 22, ಜೂನ್ 2002ರಂದು ಟೌನ್‌ಹಾಲಿನ ಮುಂದೆ ನಡೆಸಿದ ಸಾರ್ವಜನಿಕ ಪ್ರತಿಭಟನೆಯು ವೇದಿಕೆ ನಡೆಸಿದ ಮುಖ್ಯ ಕಾರ್ಯಕ್ರಮಗಳಲ್ಲೊಂದು. ಈ ಪ್ರತಿಭಟನೆಯಲ್ಲಿ ಮಹಿಳಾ ಲೈಂಗಿಕ ಕಾರ್ಮಿಕರೊಂದಿಗೆ ಕೋಥಿ ಮತ್ತು ಹಿಜ್ರಾ ಲೈಂಗಿಕ ಕಾರ್ಮಿಕರು ಪಾಲ್ಗೊಂಡಿದ್ದರು. ಮುಂದೆ ಲೈಂಗಿಕ ಕಾರ್ಮಿಕರಿಗಾಗಿ ನಡೆಸಿದ 2 ದಿನಗಳ ಕಮ್ಮಟದಲ್ಲಿ ದಕ್ಷಿಣ ಭಾರತದ ನಾಲ್ಕು ರಾಜ್ಯಗಳ ಲೈಂಗಿಕ ಕಾರ್ಮಿಕರು ಸಹ ಪಾಲ್ಗೊಂಡಿದ್ದರು. ಇವರು ನಂತರದ ಭಾನುವಾರದ ಸಭೆಯಲ್ಲೂ ಭಾಗವಹಿಸಿದ್ದರು.

ಲೈಂಗಿಕ ಕಾರ್ಮಿಕರನ್ನು ಸಂಘಟಿಸುವ ಸಂದರ್ಭದಲ್ಲಿ ಹಮಾಮ್ ಆಧಾರಿತ ಮತ್ತು ಹಮಾಮ್‌ರಹಿತ ಹಿಜ್ರಾ/ಟ್ರಾನ್ಸ್‌ಜೆಂಡರ್ ಜನರನ್ನು ಬೇರೆಯಾಗಿ ನೋಡುವ ಅಗತ್ಯವಿದೆ. ಬೀದಿಯಾಧಾರಿತ ಕೋಥಿ ಮತ್ತು ಹಿಜ್ರಾ ಲೈಂಗಿಕ ಕಾರ್ಮಿಕರು, ಇದೀಗ ಬೇರು ಬಿಡಲಾರಂಭಿಸಿರುವ ಲೈಂಗಿಕ ಕಾರ್ಮಿಕರ ಚಳುವಳಿಯಲ್ಲಿ ಉತ್ಸಾಹದಿಂದ ಪಾಲ್ಗೊಳ್ಳುತ್ತಿದ್ದಾರೆ. ಹಮಾಮ್‌ನಲ್ಲಿ ವಾಸಿಸುವ ಹಿಜ್ರಾ ಮತ್ತು ಕೋಥಿಗಳು ಸೆಕ್ಸ್ ವರ್ಕರ್ಸ್ ಕಲೆಕ್ಟಿವ್‌ನೊಂದಿಗೆ ಗುರುತಿಸಿಕೊಳ್ಳಲಿಷ್ಟಪಡುವುದಿಲ್ಲ. (ಈ ಕಲೆಕ್ಟಿವ್‌ನಲ್ಲಿ ಬೀದಿಯಾಧಾರಿತ ಮಹಿಳಾ ಲೈಂಗಿಕ ಕಾರ್ಮಿಕರೇ ಹೆಚ್ಚಿನ ಸಂಖ್ಯೆಯಲ್ಲಿದ್ದಾರೆ) ಇದಕ್ಕೆ ಕಾರಣ ಪೋಲೀಸರು ಕಣ್ಣಿಡುವರೆಂಬ ಭೀತಿ. ಹಾಗಾದರೂ ಕೆಲವರು ಟೌನ್‌ಹಾಲಿನ ಸಭೆಯಲ್ಲಿ ಭಾಗವಹಿಸಿದರು. ಬೆಂಗಳೂರಿನ ಹಮಾಮ್ ಆಧಾರಿತ ಹಿಜ್ರಾ ಸಮುದಾಯವು ಇತ್ತೀಚೆಗೆ 'ವಿವಿಧ'ದೊಂದಿಗೆ ಸಂವಾದಿಸಲು ಆರಂಭಿಸಿದೆ. ಹೊರಗಿನವರ ಮಧ್ಯಸ್ಥಿಕೆಯ ಬಗ್ಗೆ ಅನುಮಾನವಿರುವುದರಿಂದಾಗಿ ಅವರನ್ನು ತಲುಪುವುದು ಕಷ್ಟ. ತಾವಿರುವ ರೀತಿಯಿಂದಾಗಿ ಕಡೆಗಣಿಸಲ್ಪಟ್ಟವರಾದ್ದರಿಂದ ಅವರು ಟ್ರಾನ್ಸ್‌ಜೆಂಡರ್‌ಗಳನ್ನು ಭೀತಿಯಿಂದ ಕಾಣುವ ಸಮಾಜ ಮತ್ತು ರಾಜ್ಯಾಧಿಕಾರದೊಂದಿಗೆ ವ್ಯವಹರಿಸಲು ತಮ್ಮದೇ ವಿಧಾನಗಳನ್ನು ಬೆಳಸಿಕೊಂಡಿದ್ದಾರೆ. ಜೊತೆಗೆ ಹಮಾಮ್‌ನಲ್ಲಿ ಔಪಚಾರಿಕ ರಚನೆ ಇರುವುದರಿಂದಾಗಿ ಅಲ್ಲಿಗೆ ಭೇಟಿ ಕೊಟ್ಟು ಕೆಲಸ ಪ್ರಾರಂಭಿಸುವ ಪ್ರಕ್ರಿಯೆ ನಿಧಾನವಾಯಿತು. ಸಂಗಮ, ನಿಧಾನವಾಗಿ ಹಮಾಮ್‌ಗಳೊಂದಿಗೆ ತನ್ನ ಸಂಪರ್ಕವನ್ನು ಬೆಳೆಸುತ್ತಿದೆ. ಬೇರೆ ಬೇರೆ ಹಮಾಮ್‌ಗಳಿಗೆ ನಿಯಮಿತವಾಗಿ ಭೇಟಿಕೊಡುವ ಮೂಲಕ ಮುಂದಿನ ದಿನಗಳಲ್ಲಿ ಒಡನಾಟವನ್ನು ಹೆಚ್ಚಿಸಿಕೊಳ್ಳುವ ಆಶಯ ಸಂಗಮಕ್ಕಿದೆ.

ಭಾನುವಾರದ ಗುಂಪು ಲೈಂಗಿಕ ಕಾರ್ಮಿಕರ ಚಳುವಳಿಯೊಂದಿಗೆ ಸಂಪರ್ಕ ಬೆಳೆಸಿಕೊಳ್ಳುವುದರ ಜೊತೆಗೆ ಇತರೆ ವಿಷಯಗಳಲ್ಲಿ ಮತ್ತು ಇತರ ಜನಪರ ಚಳವಳಿಗಳಲ್ಲಿ ಭಾಗಿಯಾಗುವ ಪ್ರಯತ್ನ ಮಾಡಿದೆ. ಹಲವಾರು ವೇದಿಕೆಗಳು ಹಮ್ಮಿಕೊಂಡಿದ್ದ ಪ್ರತಿಭಟನೆ ಮತ್ತು ಧರಣಿಗಳಲ್ಲಿ ಸಕ್ರೀಯವಾಗಿ ಪಾಲ್ಗೊಂಡಿದೆ. ಅವುಗಳಲ್ಲಿ ಗೋದ್ರಾ ಹತ್ಯಾಕಾಂಡದ ನಂತರ ಆರಂಭವಾದ 'ಪೀಪಲ್ಸ್ ಇನಿಶಿಯೇಟಿವ್ ಫಾರ್ ಪೀಸ್ ವೇದಿಕೆ', 'ಕರ್ನಾಟಕ ಸಿಟಿಜನ್ಸ್ ಇನಿಶಿಯೇಟಿವ್ ಅಗೇನ್ಸ್ಟ್‌ವಾರ್ 'ಜನಮತ', 'ನರ್ಮದಾ ಸಾಲಿಡಾರಿಟಿ ಫೋರಂ', ಮಹಿಳಾ ಒಕ್ಕೂಟ ಮುಖ್ಯವಾದವು. ಇಂತಹ ಪ್ರತಿಭಟನೆಗಳಲ್ಲಿ ಹಿಜ್ರಾಗಳು ಮತ್ತು ಕೋಥಿಗಳು ಹೆಚ್ಚೆಚ್ಚು ಭಾಗವಹಿಸುವ ಮೂಲಕ, ಅಲ್ಪಸಂಖ್ಯಾತರ ಹಕ್ಕುಗಳ ಗುಂಪುಗಳಲ್ಲಿ, ಲೈಂಗಿಕತೆ ಅಲ್ಪಸಂಖ್ಯಾತರ ಕಾಳಜಿಯು ಗಮನ ಸೆಳೆಯತೊಡಗಿತು.

ಈ ರೀತಿಯಾಗಿ ಆಂತರಿಕವಾಗಿ ಹಾಗೂ ಇತರೆ ಸಾಮಾಜಿಕ ಚಳವಳಿಗಳೊಂದಿಗೆ ಸಂಪರ್ಕ ಸಾಧಿಸುವ ಮೂಲಕ ಸಂಘಟಿಸುವ ಪ್ರಕ್ರಿಯೆಯು ಬೆಂಗಳೂರಿನ ಕೋಥಿ, ಹಿಜ್ರಾ ಮತ್ತು ಟ್ರಾನ್ಸ್‌ಜೆಂಡರ್ ಲೈಂಗಿಕ ಕಾರ್ಮಿಕರ ಆತ್ಮವಿಶ್ವಾಸವನ್ನು ಹೆಚ್ಚಿಸಿತು. 'ವಿವಿಧ'ದ ಹುಟ್ಟು, ಬೆಂಗಳೂರಿನ ಕೋಥಿಗಳು ಹಿಜ್ರಾಗಳು ಮತ್ತು ಲೈಂಗಿಕ ಕಾರ್ಮಿಕರು ಮೌನವಾಗಿ ಬಲಿಪಶುಗಳಾಗುತ್ತಿದ್ದ ಹಂತದಿಂದ ತಮ್ಮ ಹಾಗೂ ಇತರೆ ಅಲ್ಪಸಂಖ್ಯಾತರ ಹಕ್ಕುಗಳಿಗಾಗಿ ಹೋರಾಡಲು ಸಂಘಟಿತರಾಗುವ ಹಂತ ತಲುಪಿದ್ದನ್ನು ತೋರಿಸುತ್ತದೆ.

*5.2 ಹಿಂಸೆಯ ಸಂದರ್ಭದಲ್ಲಿ ಆಪತ್ಕಾಲದ ಮಧ್ಯಸ್ಥಿಕೆ :*

ಇದೊಂದು ಬಹುಮುಖ್ಯ ಕಾರ್ಯತಂತ್ರವಾಗಿದ್ದು, ಸಾಮುದಾಯಿಕ ಭಾವನೆಯನ್ನು ಕಟ್ಟುವತ್ತ ಪ್ರಯತ್ನ ನಡೆಸುವುದು ಇದರ ಉದ್ದೇಶವಾಗಿದೆ. ಇತ್ತೀಚಿನವರೆಗೂ ಹೊರಗಿನ ಗುಂಪುಗಳು

ಹಿಜ್ರಾಗಳ ಬದುಕಿನೊಂದಿಗೆ ನಡೆಸಿದ ಒಡನಾಟವು, ಅವರ ಆಚರಣೆಗಳು ಎಷ್ಟು ಪರಕೀ ಮತ್ತು ಕುತೂಹಲಕರವೆಂದು ಬಿಂಬಿಸುವಂತಹ ಮಾನವ ವಿಜ್ಞಾನದ ಅಧ್ಯಯನದ ಸ್ವರೂಪದಲ್ಲಿ ಇಂತಹ ಅಧ್ಯಯನಗಳು ನಮ್ಮ ಬದುಕಿಗೆ ಹೇಗೆ ಉಪಯುಕ್ತ ಎಂಬ ಹಿಜ್ರಾಗಳ ಪ್ರ ಉತ್ತರಗಳಲ್ಲ. ಸಹಜವಾಗಿಯೇ ಇಂತಹ ಒಡನಾಟ ಯಾವ ರೀತಿಯಲ್ಲೂ ಉಪಯುಕ್ತ ವೆಂಬ ಅಪನಂಬಿಕೆ ಕಡೆಗಣಿಸಲ್ಪಟ್ಟಿರುವ ಗುಂಪುಗಳಿಗಿದೆ.

ಕ್ವಿಯರ್ ಜನಗಳ ವಿಷಯದಲ್ಲಿ ಪರಿಸ್ಥಿತಿ ಹೇಗಿದೆ ಎಂದರೆ –ಬಹಿರಂಗಗೊಳ್ಳುತ್ತೇವೆ ಮ ಸಮಾಜದ, ರಾಜ್ಯಾಧಿಕಾರದ ಹಿಂಸೆಗೆ ಗುರಿಯಾಗಿ ಬಿಡುತ್ತೇವೆ ಎಂಬ ಭೀತಿ ಅವರನ್ನಿ ಅಸಂಘಟಿತರನ್ನಾಗಿಯೇ ಇರಿಸಿದೆ. ಈ ರೀತಿ ಚದುರಿ ಹೋಗಿರುವುದರ ಹಾ ಸಮುದಾಯದೊಳಗೆ, ಸಾಮಾಜಿಕ ಗುಂಪುಗಳೊಳಗೆ ಇರುವ ಅಪನಂಬಿಕೆಯನ್ನು ಕುರಿತ ಕಳೆದ ಎರಡು ವರ್ಷಗಳಿಂದ ಸಕ್ರಿಯ ಹೋರಾಟ ನಡೆಯುತ್ತಿದೆ.

ಕ್ವಿಯರ್‌ಗಳನ್ನು ಎಲ್ಲ ರೀತಿಯ ಹಿಂಸೆ ಮತ್ತು ಕಿರುಕುಳಕ್ಕೆ ಒಳಪಡಿಸಲು ಪೋಲೀಸ ಬಳಸಿಕೊಳ್ಳುವುದು, ಬಹಿರಂಗಗೊಳ್ಳುತ್ತೇವೆ ಎಂಬ ಅವರ ಭೀತಿಯನ್ನ ಮತ್ತು ಸಮಾಜದ ಸಲಿಂಗಕಾಮ ಕುರಿತು ಆಳವಾಗಿ ಬೇರೂರಿರುವ ಅಸಹ್ಯಭಾವನೆಯನ್ನು. ಅವರು ಹಿಂತಿರು ಪ್ರಶ್ನಿಸುವುದಿಲ್ಲವೆಂದು ಸಂಪೂರ್ಣವಾಗಿ ಗೊತ್ತಿದ್ದರೂ ಸಹ ಪೋಲೀಸರ ವರ್ತ ಬದಲಾಗುವುದಿಲ್ಲವೆಂಬುದನ್ನು ಪಿ.ಯು.ಸಿ.ಎಲ್. –ಕರ್ನಾಟಕದ ಮೊದಲ ವರದಿಯು ತಿಳಿಸಿ (ಆದರೂ ಇಂಗ್ಲೀಷ್ ಮಾತನಾಡುವ ಕ್ವಿಯರ್‌ಗಳಿಗಿಂತ ಕಡಿಮೆ ಆದಾಯದ ಕ್ವಿಯರ್‌ಗ ಹೆಚ್ಚಾಗಿ ಪೋಲೀಸರ ಕಿರುಕುಳಕ್ಕೆ ಒಳಗಾಗುವವರು) ಕಿರುಕುಳದ ಸಂದರ್ಭಗಳಲ್ಲಿ ಹಲ ಹಂತಗಳ ಮೂಲಕ ಮಧ್ಯಸ್ಥಿಕೆವಹಿಸಬಹುದು. ಸಂಗಮದ ಅನುಭವದ ಪ್ರಕಾರ ಸಮುದಾಯವ ಸಂಘಟಿಸುವ ಉದ್ದೇಶಕ್ಕೆ ಆಪತ್ಕಾಲದ ಮಧ್ಯಸ್ಥಿಕೆಯ ಮಾದರಿಯನ್ನು ಬಳಸಿಕೊಳ್ಳುವು ಪರಿಣಾಮಕಾರಿ.

ಸಮುದಾಯದಲ್ಲಿ ಗಟ್ಟಿಯಾದ ನೆಟ್‌ವರ್ಕ್ ಅನ್ನು ಕಟ್ಟುವುದು ಸಂಗಮದ ಮೊದ ಕಾರ್ಯತಂತ್ರವಾಗಿತ್ತು. ಸಮುದಾಯದೊಂದಿಗೆ ಸಂಪರ್ಕ ಕಲ್ಪಿಸಲು ಸಾಧ್ಯವಾದಾಗ ಮೂಲಭೂ ಹಕ್ಕುಗಳು ಉಲ್ಲಂಘನೆಯಾಗಿರುವುದು ಬೆಳಕಿಗೆ ಬಂತು. ಈ ಕಾರ್ಯತಂತ್ರದ ಪ್ರಯತ್ನವಾ 'ಕೊಯಿಲೇಶನ್ ಫಾರ್ ಸೆಕ್ಷುವಾಲಿಟಿ ಮೈನಾರಿಟಿ ರೈಟ್ಸ್, (CSMR), ಸ್ಥಾಪನೆಯಾಯಿತ ಲೈಂಗಿಕತೆ ಅಲ್ಪಸಂಖ್ಯಾತರ ಹಕ್ಕುಗಳನ್ನು ಕುರಿತ, ಪೋಲೀಸರಿಂದ ಕಿರುಕುಳವಾದ ಸಂಪರ್ಕಿಸಬಹುದಾದ ಫೋನ್ ನಂಬರ್‌ವುಳ್ಳ ಒಂದು ಸಾವಿರ ಕರಪತ್ರಗಳನ್ನು ಕ್ರೂಸಿಂ ಏರಿಯಾಗಳಲ್ಲಿ ಹಂಚಲಾಯಿತು. ಇದರ ಪರಿಣಾಮವಾಗಿ ಕೋಥಿಯೊಬ್ಬರನ್ನು ಕಾನೂ ಬಾಹಿರವಾಗಿ ಬಂಧಿಸಿರುವುದು CSMRಗೆ ವರದಿಯಾಯಿತು. ಈ ವಿಷಯ ಆಂದೋಲನ ವಿಷಯವಾಗಿ ಪರಿಗಣಿತವಾಯ್ತು. ಪ್ರಾರಂಭದ ಈ ಹೆಜ್ಜೆಗಳು, ಹಿಂಸೆ ಮತ್ತು ಕಿರುಕುಳದಂತ ಪರಿಸ್ಥಿತಿಗೆ ಪರಿಣಾಮಕಾರಿಯಾಗಿ ಪ್ರತಿಕ್ರಿಯಿಸಬಹುದೆಂಬ ವಿಶ್ವಾಸವನ್ನು ಸಮುದಾಯದ ಹುಟ್ಟಿಸಿತು.

ಕಾನೂನಿನ ಸಹಾಯ ಕೋರಿ ಸಂಗಮಕ್ಕೆ ಬರುತ್ತಿದ್ದ ಕ್ವಿಯರ್ ಸಮುದಾಯದವರಿಗೆ ಸಕ್ರಿ ಬೆಂಬಲ ನೀಡುವ ಮೂಲಕ ಸಮುದಾಯ ಆಧಾರಿತ ನೆಟ್‌ವರ್ಕ್ ಅನ್ನು ಫಾಲೊ ಅ ಮಾಡುವುದು ಸಂಗಮದ ಎರಡನೆ ಕಾರ್ಯತಂತ್ರವಾಗಿತ್ತು. ಹಿಂಸೆ, ಕಿರುಕುಳ ಸಂಭವಿಸಿರುವು

ಸಂಸ್ಥೆಗೆ ತಿಳಿದ ಕೂಡಲೇ ವಿಷಯವನ್ನು ಕೋರ್ಟಿಗೆ ಒಯ್ಯಲಾಗುತ್ತಿತ್ತು. ಈ ರೀತಿ ಕಾನೂನಿನ ಮೂಲಕ ಒಂದಾದ ನಂತರ ಒಂದರಂತೆ ಮಧ್ಯಸ್ಥಿಕೆ ವಹಿಸಿದ್ದು ಆತ್ಮವಿಶ್ವಾಸ ಮೂಡಿಸಲು ಪರಿಣಾಮಕಾರಿಯಾಗಿ ಕೆಲಸ ಮಾಡಿತು. ಉದಾಹರಣೆಗೆ ಒಂದು ಕೇಸಿನಲ್ಲಿ (ಅದಿನ್ನೂ ಕೋರ್ಟಿನಲ್ಲಿದೆ) ಪೊಲೀಸರ ಹಿಂಸೆಯಿಂದಾಗಿ ಗಂಭೀರವಾಗಿ ಗಾಯಗೊಂಡಿದ್ದ ಘಟನೆಯನ್ನು ನ್ಯಾಯಾಧೀಶರ ಮುಂದೆ ತರಲಾಯಿತು. ನ್ಯಾಯಾಧೀಶರು ಸಂಬಂಧಪಟ್ಟ ಪೊಲಿಸ್ ಠಾಣೆಯ ಪೊಲಿಸ್ ಪೇದೆಯ ಮೇಲೆ ಕ್ರಮ ಜರುಗಿಸಲು ಸೂಚಿಸಿದರು. ಹಿಜ್ರಾ ಮತ್ತು ಕೋಥಿ ಲೈಂಗಿಕ ಕಾರ್ಮಿಕರನ್ನು ಪ್ರತಿನಿಧಿಸುತ್ತಿರುವ ವಕೀಲರಾದ ಬಿ.ಟಿ.ವೆಂಕಟೇಶ್ ಅವರ ಪ್ರಕಾರ ಈ ಕೇಸು ಕೋಥಿ, ಹಿಜ್ರಾ ಲೈಂಗಿಕ ಕಾರ್ಮಿಕರನ್ನು ಕಬ್ಬನ್‌ಪಾರ್ಕ್ ಪೊಲೀಸರು ನಡೆಸಿಕೊಳ್ಳುತ್ತಿದ್ದ ರೀತಿಯ ಮೇಲೆ ಒಳ್ಳೆಯ ಪ್ರಭಾವ ಬೀರಿತು. ಹಿಂಸೆಯನ್ನು ಕಾನೂನಿನ ಮೂಲಕ, ಸಂಘಟಿತ ಮಧ್ಯಸ್ಥಿಕೆಯ ಮೂಲಕ ಎದುರಿಸಲಾಗುತ್ತದೆ ಎಂಬುದು ತಿಳಿದ ಮೇಲೆ ಹಿಜ್ರಾ ಮತ್ತು ಕೋಥಿಗಳ ಮೇಲೆ ಪೊಲೀಸರು ನಡೆಸುವ ಹಿಂಸೆಯು ಶಿಕ್ಷೆಯಿಂದ ಮುಕ್ತವಲ್ಲವೆಂಬುದು ಪೊಲೀಸರಿಗೆ ಅರಿವಾಗಿದೆ.

ಇಂತಹ ಇನ್ನೂ ಹಲವಾರು ಸವಾಲುಗಳನ್ನು ದೃಢತೆಯಿಂದ ಎದುರಿಸಲಾಗಿದೆ. ಒಮ್ಮೆ ಸವಾಲನ್ನು ಒಡ್ಡುವಂತಹ ಪರಿಸ್ಥಿತಿ ಎದುರಾಯಿತು. ಸಂಗ'ಮದ ಕಛೇರಿಯಿದ್ದ ಕಟ್ಟಡದಲ್ಲಿ ಫ್ಲಾಟುಗಳ ಮಾಲೀಕರ ಸಂಘವು ಹಿಜ್ರಾಗಳು ಬರುವುದನ್ನು ವಿರೋಧಿಸಿದರು, ಪೊಲೀಸರಿಗೂ ಮನವಿ ಸಲ್ಲಿಸಿದರು. ಅವರ ಮನವಿಯ ಮೇರೆಗೆ ಪೊಲೀಸರು, ಹಿಜ್ರಾಗಳು ಸಂಗಮದ ಕಛೇರಿಗೆ ಬರುವುದಕ್ಕೆ ತಡೆಯೊಡ್ಡಿದರು. ಈ ಕಾನೂನು ಬಾಹಿರ ಕ್ರಮವನ್ನು ಹಿಂತೆಗೆದುಕೊಳ್ಳುವಂತೆ ಪೊಲೀಸರ ಮೇಲೆ ಒತ್ತಡ ಹೇರುವ ಸಲುವಾಗಿ ಪೊಲೀಸರ್ ಕಮೀಷನರ್ ಅವರಿಗೆ, ಡಿ.ಜಿ.ಪಿ.ಯವರಿಗೆ, ಮುಖ್ಯಮಂತ್ರಿಗಳಿಗೆ, ಹೈಕೋರ್ಟಿನ ನ್ಯಾಯಾಧೀಶರಿಗೆ, ರಾಷ್ಟ್ರೀಯ ಮಾನವಹಕ್ಕುಗಳ ಆಯೋಗಕ್ಕೆ ಅಂತರರಾಷ್ಟ್ರೀಯ ಗೇ ಮತ್ತು ಲೆಸ್ಬಿಯನ್ ಹಕ್ಕುಗಳ ಆಯೋಗಕ್ಕೆ ಪತ್ರ ಬರೆಯಲಾಯಿತು. ಮುಖ್ಯಮಂತ್ರಿಗಳು ಪ್ರತಿಕ್ರಿಯಿಸಿ ವಿಷಯದ ವಿಚಾರಣೆ ನಡೆಸುವುದಾಗಿಯೂ, ಪೊಲೀಸರ ಕ್ರಮವನ್ನು ಪ್ರಶ್ನಿಸುವುದಾಗಿಯೂ ಸಂಗಮಕ್ಕೆ ತಿಳಿಸಿದರು. ಕಮರ್ಶಿಯಲ್ ರಸ್ತೆಯ ಪೊಲೀಸ್ ಠಾಣೆಗೆ ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗದವರು ಪತ್ರ ಬರೆದಿದ್ದು ಪರಿಣಾಮಕಾರಿಯಾಗಿ ಕೆಲಸ ಮಾಡಿತು. ಸಂಗಮದ ನೌಕರರು ಮತ್ತು ಸಂದರ್ಶಕರು ಸೇರಿದಂತೆ ಕಟ್ಟಡದ ಎಲ್ಲ ನಿವಾಸಿಗಳ ಹಕ್ಕುಗಳನ್ನು ರಕ್ಷಿಸುವುದಾಗಿ ಪೊಲೀಸರು ಆಶ್ವಾಸನೆ ಇತ್ತರು. ಹಿಂದೆ ಸರಿಯುವುದಕ್ಕಷ್ಟೇ ಅಲ್ಲದೆ ಹಿಜ್ರಾಗಳ ಓಡಾಡುವ ಸ್ವಾತಂತ್ರ್ಯದ ಹಕ್ಕನ್ನು ರಕ್ಷಿಸುವಂತೆ ಪೊಲೀಸರ ಮೇಲೆ ಒತ್ತಾಯ ತರಲಾಯಿತು.

ಒತ್ತಡ ನಿಂತ ಕೂಡಲೇ ಪೊಲೀಸರ ಹಿಂಸೆ ತೀವ್ರವಾಗುವ ಸಾಧ್ಯತೆ ಇರುವುದರಿಂದ ಆಪತ್ಕಾಲದ ಮಧ್ಯಸ್ಥಿಕೆಯನ್ನು ನಿರಂತರವಾಗಿ ಉಳಿಸಿಕೊಳ್ಳುವ ಅಗತ್ಯವಿದೆ. ಮಾರ್ಚ್ 2002ರಲ್ಲಿ ಬೀದಿಯಾಧಾರಿತ ಕೋಥಿ ಮತ್ತು ಹಿಜ್ರಾ ಲೈಂಗಿಕ ಕಾರ್ಮಿಕರನ್ನು ಪೊಲೀಸರು ಥಳಿಸಿದ ಘಟನೆಗಳು ಅನಿರೀಕ್ಷಿತವಾಗಿ ಜರುಗಿದವು. 2002, ಮಾರ್ಚ್ 26ರಂದು ಬೆಂಗಳೂರು ಬಸ್ ನಿಲ್ದಾಣದ ಬಳಿ ಕೋಥಿ ಲೈಂಗಿಕ ಕಾರ್ಮಿಕರೊಬ್ಬರ ಮೇಲೆ ಕ್ರೂರವಾಗಿ ಆಕ್ರಮಣ ಮಾಡಲಾಯಿತು. ಮಾರ್ಚ್ 27ರಂದು ಕಬ್ಬನ್ ಪಾರ್ಕ್ ಪೊಲೀಸರು ಕೋಥಿ ಲೈಂಗಿಕ ಕಾರ್ಮಿಕರೊಬ್ಬರನ್ನು ಕಳ್ಳತನದ ಸುಳ್ಳು ಆರೋಪ ಹೊರಿಸಿ ಬಂಧಿಸಿದರು. ಅವರು ಹೆಚ್.ಐ.ವಿ/ಏಡ್ಸ್ ಕುರಿತು ಎಂ.ಎಸ್.ಎಂ. (ಮೆನ್ ಹ್ಯಾವಿಂಗ್ ಸೆಕ್ಸ್ ವಿತ್ ಮೆನ್) ನವರೊಂದಿಗೆ ಕೆಲಸ ಮಾಡುವ ಸರ್ಕಾರೇತರ ಸಂಸ್ಥೆಯೊಂದರಲ್ಲಿ ಕಾರ್ಯಕರ್ತರಾಗಿದ್ದರು. ಪೊಲೀಸ್ ಕಸ್ಟಡಿಯಲ್ಲಿ ಆಕೆಯ

ಮೇಲೆ ತೀವ್ರವಾಗಿ ಹಲ್ಲೆ ಮಾಡಲಾಗಿತ್ತು. ಆಕೆಯನ್ನು ಮಾರ್ಚ್ 30ರಂದು ನ್ಯಾಯಾಲಯದ ಹಾಜರು ಪಡಿಸಿದಾಗ ಸಂಗಮ ಆಕೆಗೆ ಜಾಮೀನು ನೀಡಿ ಬಿಡುಗಡೆ ಮಾಡಿಸಿತ್ತು. ಮಾರ್ಚ್ 2 ಮತ್ತು 27 ರಂದು ಕಬ್ಬನ್ ಪಾರ್ಕ್ ಪೋಲೀಸರು, ಹಣ ಕೀಳುತ್ತಿದ್ದಾರೆಂಬ ಸುಳ್ಳು ಆರೋ ಹೊರಿಸಿ ಐದುಜನ ಕೋಥಿ ಲೈಂಗಿಕ ಕಾರ್ಮಿಕರನ್ನು ಬಂಧಿಸಿದರು. ಕಸ್ಟಡಿಯಲ್ಲಿರುವಾಗ ಬೈಗುಳ ಮೂಲಕ/ದೈಹಿಕವಾಗಿ/ಲೈಂಗಿಕವಾಗಿ ಹಿಂಸಿಸಲಾಯಿತು. ಸಂಗಮ, ಅವರೆಲ್ಲರಿಗು ಜಾಮೀನ ನೀಡಿ ಮಾರ್ಚ್ 30 ರಂದು ಬಿಡುಗಡೆ ಮಾಡಿಸಿತು.

ವಿವಿಧ ಹಂತಗಳಲ್ಲಿ ಕಾನೂನಿನ ಕ್ರಮಕ್ಕೆ ಅನುಕೂಲವಾಗುವಂತಹ ಆಂದೋಲನವನ ಹಮ್ಮಿಕೊಳ್ಳಲಾಯಿತು. ಆಂದೋಲನದ ಭಾಗವಾಗಿ ಪತ್ರಿಕಾಗೋಷ್ಠಿಗಳನ್ನು, ಪ್ರತಿಭಟನಾ ಮೆರವಣಿಗೆಗಳನ್ನು ನಡೆಸಲಾಯಿತು. ಪೋಲೀಸ್ ಅಧಿಕಾರಿಗಳಿಗೆ, ಮುಖ್ಯಮಂತ್ರಿಗಳಿಗೆ, ಮಾನವ ಹಕ್ಕುಗಳ ಆಯೋಗದವರಿಗೆ ಮನವಿ ಮಾಡಿಕೊಳ್ಳಲಾಯಿತು. ಇ-ಮೇಲ್ ಮೂಲಕ ಹಲವರಿ ಮನವಿ ಮಾಡಿಕೊಳ್ಳಲಾಯಿತು.

ಇವೆಲ್ಲದರಿಂದಾಗಿ ಹಿಜ್ರಾಗಳು, ಕೋಥಿಗಳು ಮತ್ತು ಟ್ರಾನ್ಸ್‌ಜೆಂಡರ್ ಲೈಂಗಿಕ ಕಾರ್ಮಿಕರ ಆತ್ಮವಿಶ್ವಾಸ ಹೆಚ್ಚಿತು. ತಮ್ಮ ಹಕ್ಕುಗಳ ಬಗ್ಗೆ ಜಾಗೃತರಾಗುವ ಮೂಲಕ ಹಾಗೂ ಸಂಗಮದ ನೆರವಿನ ಮೂಲಕ ಪೋಲೀಸರ ಹಿಂಸೆಯನ್ನು ಪರಿಣಾಮಕಾರಿಯಾಗಿ ಎದುರಿಸಿದರು. ಇದರ ಪರಿಣಾಮವಾಗಿ ಪೋಲೀಸ್ ದೌರ್ಜನ್ಯ ಎಷ್ಟು ಕಡಿಮೆಯಾಯಿತೆಂದರೆ, ಪ್ರತಿಭಟನೆಯ ನಂತರ ಅಂತಹ ಘಟನೆಗಳೇ ದಾಖಲಾಗಲಿಲ್ಲ. ಭಾನುವಾರದ ಗುಂಪು 'ವಿವಿಧ' ಎಂಬ ವೇದಿಕೆಯ ಸ್ವರೂಪ ಪಡೆಯಿತು. ವಿವಿಧ, ಲೈಂಗಿಕ ಅಲ್ಪಸಂಖ್ಯಾತರ (ಹಿಜ್ರಾಗಳು, ಕೋಥಿಗಳು ಹಾಗೂ ಇತರೆ ಲೈಂಗಿಕ ಅಲ್ಪಸಂಖ್ಯಾತರನ್ನೊಳಗೊಂಡ) ಸ್ವಾಯತ್ತ ಸಂಘಟನೆಯಾಗಿದೆ. ಡಿಸೆಂಬರ 8, 2002 ರಂದು ಚಾಂದನಿ ಸಾವಿನ ವಿರುದ್ಧ ಯಶಸ್ವಿಯಾಗಿ ನಡೆಸಿದ ಪ್ರತಿಭಟನೆ 'ವಿವಿಧ ಚಟುವಟಿಕೆಗಳಲ್ಲೊಂದು. ಆ ಸಂದರ್ಭದಲ್ಲಿ ಮೊತ್ತ ಮೊದಲ ಬಾರಿಗೆ 150 ಕ್ವಿಯರ್‌ಗಳ ಹೊರಬಂದು ಬೆಂಗಳೂರಿನ ಬೀದಿಗಳಲ್ಲಿ ಪ್ರತಿಭಟಿಸಿದರು. ಪ್ರತಿಭಟನಾ ಮೆರವಣಿಗೆಯ ಜೊತ ಹಲವು ಬೇಡಿಕೆಗಳ ಪಟ್ಟಿಯನ್ನು ಮುಂದಿಡಲಾಯಿತು. ಆ ಬೇಡಿಕೆಗಳು -ಸೆಕ್ಷನ್ 377, ITP (Immoral traffiking in persons act) ಯನ್ನು ತೆಗೆಯಬೇಕು. ಹಿಜ್ರಾಗಳನ್ನು ಸಮಾನ ಅವಕಾಶವುಳ್ಳ ಮಹಿಳೆಯರಾಗಿ ಪರಿಗಣಿಸಬೇಕು ಮತ್ತು ಉದ್ಯೋಗಾವಕಾಶ, ವಸತಿ ಸೌಕರ್ಯ ಮತ್ತು ರೈಲು ಪ್ರಯಾಣದ ರಿಯಾಯಿತಿ ನೀಡಬೇಕು ಎಂಬುದನ್ನು ಒಳಗೊಂಡಿತ್ತು. (ಕರಪತ್ರಕ್ಕಾಗಿ ಅನುಬಂಧ 12ನ್ನು ನೋಡಿ)

### *5.3 ಮಾಧ್ಯಮಗಳಲ್ಲಿ ಹೆಚ್ಚಿದ ಪ್ರಚಾರ*

2002ನೇ ವರ್ಷವು ಬೆಂಗಳೂರಿನ ಹಿಜ್ರಾ ಸಮುದಾಯಕ್ಕೆ ಗಮನಾರ್ಹವಾದುದು. ಆ ವರ್ಷ ಅವರ ಕಾಳಜಿಯನ್ನು ಎತ್ತಿ ಹಿಡಿಯುವ ಹಲವಾರು ಘಟನೆಗಳು ಜರುಗಿದವು. ಆ ಘಟನೆಗಳ ಕಳೆದ ಕೆಲವು ತಿಂಗಳುಗಳಲ್ಲಿ ಮಾಧ್ಯಮಗಳ ಮೇಲೂ ಪರಿಣಮ ಬೀರಿದವು. ಅಂತಹ ಮೊದಲ ಘಟನೆ ಎಂದರೆ 'ಹಿಜ್ರಾ ಹಬ್ಬ'. 24 ಆಗಸ್ಟ್ 2002ರಂದು ವೈ.ಎಂ.ಸಿ.ಎ. ಮೈದಾನದಲ್ಲಿ ನಡೆದ ಈ ಹಬ್ಬವನ್ನು ಸಂಗಮದ ಸಹಯೋಗದೊಂದಿಗೆ ಲಯನ್ಸ್ ಕ್ಲಬ್ ಮತ್ತು ಇತರೆ ಸಂಸ್ಥೆಗಳ ಸೇರಿ ವ್ಯವಸ್ಥೆ ಮಾಡಿದ್ದವು. ಹಬ್ಬ ಸಂಭ್ರಮದ ವಾತಾವರಣವನ್ನುಂಟು ಮಾಡಿತ್ತು. ಕ್ರೀಡಾ ಸ್ಪರ್ಧೆಗಳೊಂದಿಗೆ ಕಾರ್ಯಕ್ರಮವನ್ನು ಪ್ರಾರಂಭಿಸಲಾಯಿತು. ನಂತರ ಹಾಡು, ನೃತ್ಯ

## ಮೂಲಭೂತ ಹಕ್ಕುಗಳು

**ಆರ್ಟಿಕಲ್ 14**– ಕಾನೂನಿನ ಮುಂದೆ ಸಮಾನತೆ : ಭಾರತದ ರಾಜ್ಯಕ್ಷೇತ್ರದಲ್ಲಿ ಯಾರೇ ವ್ಯಕ್ತಿಗೆ ಕಾನೂನಿನ ಮುಂದೆ ಸಮಾನತೆಯನ್ನು ಅಥವಾ ಕಾನೂನುಗಳಿಂದ ಸಮಾನ ಸಂರಕ್ಷಣೆಯನ್ನು ರಾಜ್ಯವು ನಿರಾಕರಿಸತಕ್ಕುದಲ್ಲ.

**ಆರ್ಟಿಕಲ್ 15** – ಧರ್ಮ, ಮೂಲವಂಶ, ಜಾತಿ,ಲಿಂಗ ಅಥವ ಜನ್ಮಸ್ಥಳದ ಆಧಾರಗಳ ಮೇಲೆ ತಾರತಮ್ಯದ ನಿಷೇಧ:–

(1) ರಾಜ್ಯವು ಯಾರೇ ನಾಗರಿಕನ ವಿರುದ್ಧ ಧರ್ಮ, ಮೂಲವಂಶ, ಜಾತಿ, ಲಿಂಗ, ಜನ್ಮಸ್ಥಳ ಅಥವಾ ಅವುಗಳಲ್ಲಿ ಯಾವುದೇ ಒಂದರ ಆಧಾರದ ಮೇಲೆ ಮಾತ್ರವೇ ಯಾವುದೇ ತಾರತಮ್ಯವನ್ನು ಮಾಡತಕ್ಕುದಲ್ಲ.

(2) ಧರ್ಮ, ಮೂಲವಂಶ, ಜಾತಿ, ಲಿಂಗ, ಜನ್ಮಸ್ಥಳ ಅಥವಾ ಅವುಗಳಲ್ಲಿ ಒಂದರ ಆಧಾರದ ಮೇಲೆ ಮಾತ್ರವೇ ಯಾವನೇ ನಾಗರಿಕನು–

(ಎ) ಅಂಗಡಿಗಳು, ಸಾರ್ವಜನಿಕ ಉಪಾಹಾರ ಗೃಹಗಳು, ಹೋಟೆಲುಗಳು ಮತ್ತು ಸಾರ್ವಜನಿಕ ಮನೋರಂಜನ ಸ್ಥಳಗಳು– ಇವುಗಳಿಗೆ ಪ್ರವೇಶಿಸುವ ಸಂಬಂಧದಲ್ಲಿ; ಅಥವಾ

(ಬಿ) ಪೂರ್ಣವಾಗಿ ಅಥವಾ ಭಾಗಶಃ ರಾಜ್ಯ ನಿಧಿಗಳಿಂದ ಪೋಷಿತವಾದ ಅಥವಾ ಸಾರ್ವಜನಿಕರ ಉಪಯೋಗಕ್ಕಾಗಿ ಸಮರ್ಪಿತವಾದ ಬಾವಿಗಳನ್ನು, ಕೆರೆಗಳನ್ನು, ಸ್ನಾನಘಟ್ಟಗಳನ್ನು, ರಸ್ತೆಗಳನ್ನು ಮತ್ತು ಸಾರ್ವಜನಿಕರು ಸೇರುವ ಸ್ಥಳಗಳನ್ನು ಉಪಯೋಗಿಸುವ ಸಂಬಂಧದಲ್ಲಿ–

ಯಾವುದೇ ಅಸಮರ್ಥತೆಗೆ, ಹೊಣೆಗಾರಿಕೆಗೆ, ನಿರ್ಬಂಧಕ್ಕೆ ಅಥವಾ ಷರತ್ತಿಗೆ ಒಳಪಟ್ಟಿರತಕ್ಕುದಲ್ಲ.

3) ಈ ಅನುಚ್ಛೇದದಲ್ಲಿ ಇರುವುದು ಯಾವುದೂ, ಹೆಂಗಸರು ಮತ್ತು ಮಕ್ಕಳಿಗಾಗಿ ವಿಶೇಷ ಉಪಬಂಧವನ್ನು ಮಾಡದಂತೆ ರಾಜ್ಯವನ್ನು ಪ್ರತಿಬಂಧಿಸತಕ್ಕುದಲ್ಲ.

4) ಈ ಅನುಚ್ಛೇದದಲ್ಲಿ ಅಥವಾ 29ನೆಯ ಅನುಚ್ಛೇದದ(2)ನೆಯ ಖಂಡದಲ್ಲಿ ಇರುವುದು ಯಾವುದೂ, ಸಾಮಾಜಿಕವಾಗಿ ಮತ್ತು ಶೈಕ್ಷಣಿಕವಾಗಿ ಹಿಂದುಳಿದಿರುವ ನಾಗರಿಕರ ಯಾವುದೇ ವಿಶೇಷ ಉಪಬಂಧವನ್ನು ಮಾಡದಂತೆ ಪ್ರತಿಬಂಧಿಸತಕ್ಕುದಲ್ಲ.

**ಆರ್ಟಿಕಲ್ 16** – ಸಾರ್ವಜನಿಕ ನಿಯೋಜನೆಯ ವಿಷಯದಲ್ಲಿ ಸಮಾನಾವಕಾಶ:–

(1) ರಾಜ್ಯದ ಅಧೀನದಲ್ಲಿರುವ ಯಾವುದೇ ಪದಕ್ಕೆ ಸಂಬಂಧಿಸಿದಂತೆ ನಿಯೋಜನೆ ಅಥವಾ ನೇಮಕಾತಿಯ ವಿಷಯದಲ್ಲಿ ಎಲ್ಲ ನಾಗರಿಕರಿಗೂ ಸಮಾನ ಅವಕಾಶವಿರತಕ್ಕುದು.

(2) ಧರ್ಮ, ಮೂಲವಂಶ, ಜಾತಿ, ಲಿಂಗ, ಸಂತತಿ, ಜನ್ಮಸ್ಥಳ, ನಿವಾಸ ಅಥವಾ ಇವುಗಳಲ್ಲಿ ಯಾವುದೇ ಒಂದರ ಆಧಾರದ ಮೇಲೆ ಮಾತ್ರವೇ ಯಾರೇ ನಾಗರಿಕನು ರಾಜ್ಯದ ಅಧೀನದಲ್ಲಿರುವ ಯಾವುದೇ ನಿಯೋಜನೆಗೆ ಅಥವಾ ಪದಕ್ಕೆ ಸಂಬಂಧಿಸಿದಂತೆ ಅನರ್ಹತೆಗೆ ಒಳಗಾಗತಕ್ಕುದಲ್ಲ ಅಥವಾ ಅವನ ವಿರುದ್ಧ ತಾರತಮ್ಯವನ್ನು ಮಾಡತಕ್ಕುದಲ್ಲ.

(3) ಈ ಅನುಚ್ಛೇದದಲ್ಲಿ ಇರುವುದು ಯಾವುದೂ [ಒಂದು ರಾಜ್ಯ ಸರ್ಕಾರದ ಅಥವಾ ಒಕ್ಕೂಟ ರಾಜ್ಯಕ್ಷೇತ್ರದ ಅಧೀನದಲ್ಲಿರುವ ಅಥವಾ ರಾಜ್ಯದ ಒಕ್ಕೂಟ ರಾಜ್ಯಕ್ಷೇತ್ರದೊಳಗಿರುವ ಯಾವುದೇ ಸ್ಥಳೀಯ ಅಥವಾ ಇತರ ಪ್ರಾಧಿಕಾರದ ಅಧೀನದಲ್ಲಿರುವ ಯಾವುದೇ ವರ್ಗದ ಅಥವಾ ವರ್ಗಗಳ ನಿಯೋಜನೆಗೆ ಅಥವಾ ಪದಕ್ಕೆ ಸಂಬಂಧಿಸಿದ ನೇಮಕಾತಿಯ ಬಗ್ಗೆ, ಅಂಥ ನಿಯೋಜನೆಗೆ ಅಥವಾ ನೇಮಕಾತಿಗೆ ಮುಂಚೆ ಆ ರಾಜ್ಯದಲ್ಲಿ ಅಥವಾ ಆ ಒಕ್ಕೂಟ ರಾಜ್ಯಕ್ಷೇತ್ರದಲ್ಲಿ ನಿವಾಸದ ಯಾವುದೇ ಅಗತ್ಯತೆಯನ್ನು] ನಿಯಮಿಸುವ ಯಾವುದೇ ಕಾನೂನನ್ನು ಮಾಡದಂತೆ ಸಂಸತ್ತನ್ನು ಪ್ರತಿಬಂಧಿಸತಕ್ಕುದಲ್ಲ.

**ಆರ್ಟಿಕಲ್ 17** – ಅಸ್ಪೃಶ್ಯತೆಯ ನಿರ್ಮೂಲನ:- "ಅಸ್ಪೃಶ್ಯತೆ"ಯನ್ನು ನಿರ್ಮೂಲನಗೊಳಿಸಲಾಗಿದೆ ಮತ್ತು ಯಾವುದೇ ರೂಪದಲ್ಲಿ ಅದರ ಆಚರಣೆಯನ್ನು ನಿಷೇಧಿಸಲಾಗಿದೆ. "ಅಸ್ಪೃಶ್ಯತೆ"ಯಿಂದ ಉದ್ಭವಿಸುವ ಯಾವುದೇ ಅಸಮರ್ಥತೆಯನ್ನು ಆಚರಣೆಗೆ ತರುವುದು ಕಾನೂನಿಗನುಸಾರವಾಗಿ ದಂಡನೀಯವಾದ ಅಪರಾಧವಾಗತಕ್ಕುದು.

**ಆರ್ಟಿಕಲ್ 19** – ವಾಕ್ ಸ್ವಾತಂತ್ರ್ಯ ಮುಂತಾದವುಗಳ ಬಗ್ಗೆ ಕೆಲವು ಹಕ್ಕುಗಳ ಸಂರಕ್ಷಣೆ:-

(1) ಸಮಸ್ತ ನಾಗರಿಕರೂ-

(ಎ) ವಾಕ್ ಸ್ವಾತಂತ್ರ್ಯದ ಮತ್ತು ಅಬಿವ್ಯಕ್ತಿ ಸ್ವಾತಂತ್ರ್ಯದ;

(ಬಿ) ಶಾಂತಿಯಿಂದ ಹಾಗೂ ನಿರಾಯುಧರಾಗಿ ಸಭೆ ಸೇರುವ:

(ಸಿ) ಸಂಸ್ಥೆಗಳನ್ನು ಅಥವಾ ಸಂಘಗಳನ್ನು ರಚಿಸುವ:

(ಡಿ) ಭಾರತದ ರಾಜ್ಯಕ್ಷೇತ್ರದಲ್ಲಿ ಅಬಾಧಿತವಾಗಿ ಸರ್ವತ್ರಸಂಚಾರ ಮಾಡುವ:

(ಇ) ಭಾರತದ ರಾಜ್ಯಕ್ಷೇತ್ರದಲ್ಲಿ ಯಾವುದೇ ಭಾಗದಲ್ಲಿ ವಾಸಮಾಡುವ ಮತ್ತು ನೆಲಸುವ:

(ಜಿ) ಯಾವುದೇ ವೃತ್ತಿಯನ್ನು ನಡೆಸುವ ಅಥವಾ ಕಸಬನ್ನು, ವ್ಯಾಪಾರವನ್ನು ಅಥವಾ ವ್ಯವಹಾರವನ್ನು ನಡೆಸುವ

– ಹಕ್ಕನ್ನು ಹೊಂದಿರತಕ್ಕುದು.

(2) [(1)ನೆಯ ಖಂಡದ (ಎ) ಉಪಖಂಡದಿಂದ ಪ್ರಧಾನ ಮಾಡಲಾಗಿರುವ ಹಕ್ಕನ್ನು ಚಲಾಯಿಸುವುದಕ್ಕೆ ಸಂಬಂಧಿಸಿ [ಭಾರತದ ಸಾರ್ವಭೌಮತ್ವ ಮತ್ತು ಅಖಂಡತೆಯ, ರಾಜ್ಯದ ಭದ್ರತೆಯ, ವಿದೇಶಿ ರಾಜ್ಯಗಳೊಡನೆ ಸ್ನೇಹಯುತ ಸಂಬಂಧಗಳ, ಸಾರ್ವಜನಿಕ ಸುವ್ಯವಸ್ಥೆಯ, ಸಭ್ಯತೆಯ ಅಥವಾ ನೈತಿಕತೆಯ ಸಲುವಾಗಿ ಅಥವಾ ನ್ಯಾಯಲಯದ ನಿಂದನೆಯ, ಮಾನನಷ್ಟದ ಅಥವಾ ಒಂದು ಅಪರಾಧದ ಚಿತಾವಣೆಯ ಸಂಬಂಧದಲ್ಲಿ ಯುಕ್ತ ನಿರ್ಬಂಧಗಳನ್ನು ವಿಧಿಸುವ ಮಟ್ಟಿಗೆ ಅಸ್ತಿತ್ವದಲ್ಲಿರುವ ಯಾವುದೇ ಕಾನೂನಿನ ಜಾರಿಯ ಮೇಲೆ

ಸದರಿ ಉಪಖಂಡದಲ್ಲಿರುವುದು ಯಾವುದೂ ಪರಿಣಾಮ ಬೀರತಕ್ಕುದಲ್ಲ ಅಥವಾ ಅಂಥ ಯಾವುದೇ ಕಾನೂನನ್ನು ಮಾಡದಂತೆ ರಾಜ್ಯವನ್ನು ಪ್ರತಿಬಂಧಿಸತಕ್ಕುದಲ್ಲ].

(3) (1)ನೆಯ ಖಂಡದ (ಬಿ) ಉಪಖಂಡದಿಂದ ಪ್ರದಾನ ಮಾಡಲಾಗಿರುವ ಹಕ್ಕನ್ನು ಚಲಾಯಿಸುವುದಕ್ಕೆ ಸಂಬಂಧಿಸಿ [ಭಾರತದ ಸಾರ್ವಭೌಮತ್ವ ಮತ್ತು ಅಖಂಡತೆಯ ಸಲುವಾಗಿ ಅಥವಾ] ಸಾರ್ವಜನಿಕ ಸುವ್ಯವಸ್ಥೆಯ ಸಲುವಾಗಿ ಯುಕ್ತ ನಿರ್ಬಂಧಗಳನ್ನು ವಿಧಿಸುವ ಮಟ್ಟಿಗೆ. ಅಸ್ತಿತ್ವದಲ್ಲಿರುವ ಯಾವುದೇ ಕಾನೂನಿನ ಜಾರಿಯ ಮೇಲೆ ಸದರಿ ಉಪಖಂಡದಲ್ಲಿರುವುದು ಯಾವುದೂ ಪರಿಣಾಮ ಬೀರತಕ್ಕುದಲ್ಲ ಅಥವಾ ಅಂಥ ಯಾವುದೇ ಕಾನೂನನ್ನು ಮಾಡದಂತೆ ರಾಜ್ಯವನ್ನು ಪ್ರತಿಬಂಧಿಸತಕ್ಕುದಲ್ಲ.

(4) (1)ನೆಯ ಖಂಡದ (ಸಿ) ಉಪಖಂಡದಿಂದ ಪ್ರದಾನ ಮಾಡಲಾಗಿರುವ ಹಕ್ಕನ್ನು ಚಲಾಯಿಸುವುದಕ್ಕೆ ಸಂಬಂಧಿಸಿ [ಭಾರತದ ಸಾರ್ವಭೌಮತ್ವ ಮತ್ತು ಅಖಂಡತೆಯ ಸಲುವಾಗಿ ಅಥವಾ] ಸಾರ್ವಜನಿಕ ಸುವ್ಯವಸ್ಥೆಯ ಅಥವಾ ನೈತಿಕತೆಯ ಸಲುವಾಗಿ ಯುಕ್ತ ನಿರ್ಬಂಧಗಳನ್ನು ವಿಧಿಸುವ ಮಟ್ಟಿಗೆ. ಅಸ್ತಿತ್ವದಲ್ಲಿರುವ ಯಾವುದೇ ಕಾನೂನಿನ ಜಾರಿಯ ಮೇಲೆ ಸದರಿ ಉಪಖಂಡದಲ್ಲಿರುವುದು ಯಾವುದೂ ಪರಿಣಮ ಬೀರತಕ್ಕುದಲ್ಲ ಅಥವಾ ಅಂಥ ಯಾವುದೇ ಕಾನೂನನ್ನು ಮಾಡದಂತೆ ರಾಜ್ಯವನ್ನು ಪ್ರತಿಬಂಧಿಸತಕ್ಕುದಲ್ಲ.

(5) (1)ನೆಯ ಖಂಡದ [(ಡಿ) ಮತ್ತು (ಇ) ಉಪಖಂಡಗಳಿಂದ] ಪ್ರಧಾನ ಮಾಡಲಾಗಿರುವ ಯಾವುದೇ ಹಕ್ಕುಗಳನ್ನು ಚಲಾಯಿಸುವುದಕ್ಕೆ ಸಂಬಂಧಿಸಿ ಸಾರ್ವಜನಿಕ ಹಿತಾಸಕ್ತಿಯ. ಅಥವಾ ಯಾವುದೇ ಅನುಸೂಚಿತ ಬುಡಕಟ್ಟಿನ ಹಿತಾಸಕ್ತಿಗಳ ಸಂರಕ್ಷಣೆಯ ಸಲುವಾಗಿ ಯುಕ್ತ ನಿರ್ಬಂಧಗಳನ್ನು ವಿಧಿಸುವ ಮಟ್ಟಿಗೆ ಅಸ್ತಿತ್ವದಲ್ಲಿರುವ ಯಾವುದೇ ಕಾನೂನಿನ ಜಾರಿಯ ಮೇಲೆ ಸದರಿ ಉಪಖಂಡಗಳಲ್ಲಿರುವುದು ಯಾವುದೂ ಪರಿಣಾಮ ಬೀರತಕ್ಕುದಲ್ಲ ಅಥವಾ ಅಂಥ ಯಾವುದೇ ಕಾನೂನನ್ನು ಮಾಡದಂತೆ ರಾಜ್ಯವನ್ನು ಪ್ರತಿಬಂಧಿಸತಕ್ಕುದಲ್ಲ.

(6) (1)ನೆಯ ಖಂಡದ (ಜಿ) ಉಪಖಂಡದಿಂದ ಪ್ರಧಾನ ಮಾಡಲಾಗಿರುವ ಹಕ್ಕನ್ನು ಚಲಾಯಿಸುವುದಕ್ಕೆ ಸಂಬಂಧಿಸಿ ಸಾರ್ವಜನಿಕ ಹಿತಾಸಕ್ತಿಯ ಸಲುವಾಗಿ ಯುಕ್ತ ನಿರ್ಬಂಧಗಳನ್ನು ವಿಧಿಸುವ ಮಟ್ಟಿಗೆ ಅಸ್ತಿತ್ವದಲ್ಲಿರುವ ಯಾವುದೇ ಕಾನೂನಿನ ಜಾರಿಯ ಮೇಲೆ ಸದರಿ ಉಪಖಂಡಗಳಲ್ಲಿರುವುದು ಯಾವುದೂ ಪರಿಣಾಮ ಬೀರತಕ್ಕುದಲ್ಲ ಅಥವಾ ಅಂಥ ಯಾವುದೇ ಕಾನೂನನ್ನು ಮಾಡದಂತೆ ರಾಜ್ಯವನ್ನು ಪ್ರತಿಬಂಧಿಸತಕ್ಕುದಲ್ಲ: ಮತ್ತು ವಿಶೇಷವಾಗಿ.-

(1) ಯಾವುದೇ ವೃತ್ತಿಯನ್ನು. ಕಸುಬನ್ನು. ವ್ಯಾಪಾರವನ್ನು ಅಥವಾ ವ್ಯವಹಾರವನ್ನು ನಡೆಯಿಸಲು ಅವಶ್ಯವಾದ ವೃತ್ತಿಯ ಅಥವಾ ತಾಂತ್ರಿಕ ಅರ್ಹತೆಗಳಿಗೆ: ಅಥವಾ

(2) ಯಾವುದಾದರೂ ವ್ಯಾಪಾರವನ್ನು. ವ್ಯವಹಾರವನ್ನು. ಕೈಗಾರಿಕೆಯನ್ನು ಅಥವಾ ಸೇವೆಯನ್ನು. ರಾಜ್ಯವೇ ಆಗಲಿ ಅಥವಾ ರಾಜ್ಯದ ಒಡೆತನದಲ್ಲಿ ಅಥವಾ ನಿಯಂತ್ರಣದಲ್ಲಿರುವ ನಿಗಮವೇ ಆಗಲಿ. ಪೂರ್ಣವಾಗಿ ಅಥವಾ ಭಾಗಶಃ ನಾಗರಿಕರನ್ನು ಸೇರಿಸದೆ ಅಥವಾ ಅನ್ಯಥಾ ನಡೆಯಿಸಿಕೊಂಡು ಬರುವುದಕ್ಕೆ

– ಸಂಬಂಧಪಡುವ ಮಟ್ಟಿಗೆ ಅಸ್ತಿತ್ವದಲ್ಲಿರುವ ಯಾವುದೇ ಕಾನೂನಿನ ಜಾರಿಯ ಮೇಲೆ [ಆ ಉಪಖಂಡದಲ್ಲಿ ಇರುವುದು ಯಾವುದೇ ಪರಿಣಾಮ ಬೀರತಕ್ಕುದಲ್ಲ ಅಥವಾ ಅವುಗಳಿಗೆ ಸಂಬಂಧಪಟ್ಟಂತೆ ಯಾವುದೇ ಕಾನೂನನ್ನು ಮಾಡದಂತೆ ಯಾವುದೇ ರಾಜ್ಯವನ್ನು ಪ್ರತಿಬಂಧಿಸತಕ್ಕುದಲ್ಲ].

**ಆರ್ಟಿಕಲ್ 20** – ಅಪರಾಧಗಳ ಬಗ್ಗೆ ಅಪರಾಧಿಯೆಂದು ನಿರ್ಣಯಿಸುವ ಸಂಬಂಧದಲ್ಲಿ ಸಂರಕ್ಷಣೆ:–

(1) ಯಾವ ಕೃತ್ಯವನ್ನು ಅಪರಾಧವೆಂದು ಆರೋಪಿಸಲಾಗಿದೆಯೋ ಆ ಕೃತ್ಯವನ್ನು ಮಾಡಿದ ಕಾಲದಲ್ಲಿ ಜಾರಿಯಲ್ಲಿರುವ ಕಾನೂನಿನ ಉಲ್ಲಂಘನೆ ಮಾಡಿದ ಯಾರೇ ವ್ಯಕ್ತಿಯನ್ನು ಆ ಅಪರಾಧದ ಬಗ್ಗೆ ಮಾತ್ರ ಅಪರಾಧಿಯೆಂದು ನಿರ್ಣಯಿಸತಕ್ಕುದೇ ಹೊರತು ಮತ್ತಾವುದೇ ಅಪರಾಧದ ಬಗ್ಗೆ ಅಪರಾಧಿಯೆಂದು ನಿರ್ಣಯಿಸತಕ್ಕುದಲ್ಲ ಮತ್ತು ಆ ಅಪರಾಧವು ನಡೆದ ಕಾಲದಲ್ಲಿ ಜಾರಿಯಲ್ಲಿರತಕ್ಕ ಕಾನೂನಿನ ಮೇರೆಗೆ ವಿಧಿಸಬಹುದಾಗಿದ್ದ ದಂಡನೆಗಿಂತ ಹೆಚ್ಚಿನ ದಂಡನೆಗೆ ಅವನ್ನು ಗುರಿಪಡಿಸತಕ್ಕುದಲ್ಲ.

(2) ಯಾರೇ ವ್ಯಕ್ತಿಯನ್ನು ಒಂದೇ ಅಪರಾಧಕ್ಕಾಗಿ ಒಂದಕ್ಕಿಂತ ಹೆಚ್ಚು ಸಲ ಪ್ರಾಸಿಕ್ಯೂಷನ್‌ಗೆ ಗುರಿಪಡಿಸತಕ್ಕುದಲ್ಲ ಹಾಗೂ ದಂಡಿಸತಕ್ಕುದಲ್ಲ.

(3) ಯಾವುದೇ ಅಪರಾಧದ ಸಂಬಂಧದಲ್ಲಿ ಆರೋಪಿತನಾಗಿರುವ ಯಾರೇ ವ್ಯಕ್ತಿಯನ್ನು ತನ್ನ ವಿರುದ್ಧವಾಗಿ ತಾನೇ ಸಾಕ್ಷಿಯಾಗುವಂತೆ ಒತ್ತಾಯಿಸತಕ್ಕುದಲ್ಲ.

**ಆರ್ಟಿಕಲ್ 21** – ಜೀವ ಸಂರಕ್ಷಣೆ ಮತ್ತು ವ್ಯಕ್ತಿ ಸ್ವಾತಂತ್ರ್ಯದ ಸಂರಕ್ಷಣೆ:– ಕಾನೂನಿನ ಮೂಲಕ ಸ್ಥಾಪಿತವಾಗಿರುವ ಪ್ರಕ್ರಿಯೆಗೆ ಅನುಸಾರವಾಗಿ ಹೊರತು, ಯಾರೇ ವ್ಯಕ್ತಿಯ ಜೀವವನ್ನು ಅಥವಾ ವ್ಯಕ್ತಿ ಸ್ವಾತಂತ್ರ್ಯವನ್ನು ಹರಣ ಮಾಡತಕ್ಕುದಲ್ಲ.

**ಆರ್ಟಿಕಲ್ 22** – ಕೆಲವು ಸಂದರ್ಭಗಳಲ್ಲಿ ದಸ್ತಗಿರಿಯಿಂದ ಮತ್ತು ಸ್ಥಾನಬದ್ಧತೆಯಿಂದ ಸಂರಕ್ಷಣೆ:–

(1) ದಸ್ತಗಿರಿಯಾದ ಯಾರೇ ವ್ಯಕ್ತಿಗೆ, ಅಂಥ ದಸ್ತಗಿರಿಯ ಕಾರಣಗಳನ್ನು ಆದಷ್ಟು ಬೇಗನೆ ತಿಳಿಸದೆ ಅವನನ್ನು ಅಭಿರಕ್ಷೆಯಲ್ಲಿ ಸ್ಥಾನಬದ್ಧಗೊಳಿಸಿ ಇಡತಕ್ಕುದಲ್ಲ ಮತ್ತು ತನಗೆ ಇಷ್ಟವಾದ ನ್ಯಾಯವಾದಿಯೊಡನೆ ಸಮಾಲೋಚಿಸುವ ಮತ್ತು ಅವನಿಂದ ಪ್ರತಿರಕ್ಷೆ ಪಡೆಯುವ ಹಕ್ಕನ್ನು ಆ ವ್ಯಕ್ತಿಗೆ ನಿರಾಕರಿಸತಕ್ಕುದಲ್ಲ.

(2) ದಸ್ತಗಿರಿಯಾದ ಹಾಗೂ ಅಭಿರಕ್ಷೆಯಲ್ಲಿ ಸ್ಥಾನಬದ್ಧಗೊಳಿಸಲಾದ ಪ್ರತಿಯೊಬ್ಬ ವ್ಯಕ್ತಿಯನ್ನೂ, ದಸ್ತಗಿರಿಯಾದ ಸ್ಥಳದಿಂದ ಮ್ಯಾಜಿಸ್ಟ್ರೇಟನ ನ್ಯಾಯಾಲಯಕ್ಕೆ ಹೋಗುವುದಕ್ಕೆ ಅವಶ್ಯವಾದ ಕಾಲವನ್ನು ಹೊರತುಪಡಿಸಿ, ದಸ್ತಗಿರಿಯ ತರುವಾಯ ಇಪ್ಪತ್ತನಾಲ್ಕು ಗಂಟೆಗಳ ಅವಧಿಯೊಳಗಾಗಿ ಅತ್ಯಂತ ಸಮೀಪದ ಮ್ಯಾಜಿಸ್ಟ್ರೇಟನ ಮುಂದೆ ಹಾಜರುಪಡಿಸತಕ್ಕುದು ಮತ್ತು ಮ್ಯಾಜಿಸ್ಟ್ರೇಟನಿಂದ ಅಧಿಕಾರವನ್ನು ಪಡೆಯದೆ ಅಂಥ ಯಾರೇ ವ್ಯಕ್ತಿಯನ್ನು ಸದರಿ ಅವಧಿಗಿಂತ ಹೆಚ್ಚಾಗಿ ಅಭಿರಕ್ಷೆಯಲ್ಲಿ ಸ್ಥಾನಬದ್ಧಗೊಳಿಸತಕ್ಕುದಲ್ಲ.

# ಭಾರತೀಯ ಕಾನೂನಿನಡಿಯಲ್ಲಿ ನಿಮಗಿರುವ ಹಕ್ಕುಗಳು

1. ಎಫ್.ಐ.ಆರ್. : (First imformation Report, ಪ್ರಥಮ ಮಾಹಿತಿ ವರದಿ)ನೀವು ನೊಂದಾಯಿಸಿದ ಎಫ್.ಐ.ಆರ್. ಅನ್ನು ಶುಲ್ಕವಿಲ್ಲದೆ ಪಡೆಯುವ ಹಕ್ಕು ನಿಮಗಿದೆ.
2. ದಸ್ತಗಿರಿ : ನ್ಯಾಯಾಧೀಶರ ಅನುಮತಿ ಇಲ್ಲದೆ ಕೈ ಬೇಡಿಗಳನ್ನು ಬಳಸುವಂತಿಲ್ಲ.
3. ದಸ್ತಗಿರಿ ಮಾಡಲು ಬರುವ ಪೋಲೀಸರು ಸ್ಪಷ್ಟವಾದ ಮತ್ತು ಕಾಣುವ ಹೆಸರಿನ ಪಟ್ಟಿ ಮತ್ತು ಸಮವಸ್ತ್ರವನ್ನು ಧರಿಸಿರತಕ್ಕದ್ದು.
4. ದಸ್ತಗಿರಿ ಮಾಡಿರುವ ಕಾರಣವನ್ನು, ಜಾಮೀನು ಪಡೆಯಲು ಮತ್ತು ನಿಮ್ಮ ಆಯ್ಕೆಯ ವಕೀಲರನ್ನು ನೇಮಿಸಿಕೊಳ್ಳಲು ಇರುವ ಹಕ್ಕನ್ನು ತಿಳಿಸತಕ್ಕದ್ದು.
5. ದಸ್ತಗಿರಿ ಮಾಡಿದ ಸಮಯ ಮತ್ತು ದಿನಾಂಕವುಳ್ಳ ದಸ್ತಗಿರಿ ಮೆಮೊವನ್ನು ತಯಾರಿಸಬೇಕು ಅದಕ್ಕೆ ಕುಟುಂಬದ ಸದಸ್ಯರ/ ನೆರೆಹೊರೆಯ ಗೌರವಾನ್ವಿತ ಸದಸ್ಯರ ಸಹಿ ಹಾಕಿಸಬೇಕು.
6. ದಸ್ತಗಿರಿ ಮಾಡಿರುವುದನ್ನು ಮತ್ತು ಮಾಡಿದ ಮೇಲೆ ನಿಮ್ಮನ್ನಿರಿಸಿರುವ ಸ್ಥಳವನ್ನು ನಿಮ್ಮ ಬಗ್ಗೆ ಕಾಳಜಿ ಇರುವ ವ್ಯಕ್ತಿಗೆ ಪೋಲೀಸರು ತಿಳಿಸತಕ್ಕದ್ದು.
7. ನಿಮ್ಮಿಂದ ಸ್ವಾಧೀನಪಡಿಸಿಕೊಂಡ ವಸ್ತುಗಳ ಕರಾರುವಕ್ಕಾದ ಪಟ್ಟಿಯನ್ನು ತಯಾರಿಸಬೇಕು. ಆ ಪಟ್ಟಿಯ ಪ್ರತಿಯನ್ನು ಕೂಡಲೇ ಪಡೆಯುವ ಹಕ್ಕು ನಿಮಗಿದೆ.

**ಕಾನೂನು ಸಲಹೆ**

1. ನೀವು ಬಡವರಾಗಿದ್ದಲ್ಲಿ, ಸರ್ಕಾರಿ ವೆಚ್ಚದಲ್ಲಿ ಅರ್ಹ ವಕೀಲರನ್ನು ಕೇಳುವ ಹಕ್ಕು ನಿಮಗಿದೆ.
2. ನಿಮ್ಮ ವಕೀಲರು ಅರ್ಹರಾಗಿರದಿದ್ದಲ್ಲಿ, ವಕೀಲರನ್ನು ಬದಲಾಯಿಸುವ ಹಕ್ಕು ನಿಮಗಿದೆ.
3. ನಿಮ್ಮ ವಕೀಲರೊಂದಿಗೆ ಸಂದರ್ಶನ, ಭೇಟಿ ಮಾಡುವ ಹಕ್ಕು ಗೌಪ್ಯವಾಗಿ ಸಂವಾದಿಸುವ ಹಕ್ಕು ನಿಮಗಿದೆ.
4. ನಿಮ್ಮನ್ನಿಟ್ಟಿರುವ ಪೋಲೀಸ್‌ಠಾಣೆಗೆ ನಿಮ್ಮ ವಕೀಲರು/ಸಂಘಗಳು/ ಸ್ನೇಹಿತರು ಪೋನ್ ಮಾಡಲು ಕೇಳಿ. ಆ ರೀತಿ ಕರೆ ಮಾಡಿದಾಗ, ನಿಮ್ಮನ್ನು ಬೆಂಬಲಿಸುವವರಿದ್ದಾರೆ ಎಂಬುದು ಪೋಲೀಸರಿಗೆ ತಿಳಿಯುತ್ತದೆ ಮತ್ತು ನಿಮ್ಮನ್ನು ಕೆಟ್ಟದಾಗಿ ನಡೆಸಿಕೊಳ್ಳುವುದು ಕಡಿಮೆಯಾಗಬಹುದು.

**ಶೋಧನೆ**

1. ಇಬ್ಬರು ಸ್ವತಂತ್ರ ಸಾಕ್ಷಿಗಳು (ಪಂಚರು) ನಿಮ್ಮ ಸ್ಥಳವನ್ನು ಶೋಧಿಸುವಾಗ ಉಪಸ್ಥಿತರಿರಬೇಕು.
2. ಶೋಧನೆಯನ್ನು ವೀಕ್ಷಿಸಲು ಇಬ್ಬರು ಸಾಕ್ಷಿಗಳನ್ನು (ನಿಮ್ಮ ಕುಟುಂಬದವರಲ್ಲ) ಕರೆಸಿ.

**ಜಾಮೀನು**

1. ಜಾಮೀನಿನ ಮೇಲೆ ಬಿಡುಗಡೆ ಮಾಡಲು ನ್ಯಾಯಾಲಯಕ್ಕೆ ಕೂಡಲೇ ಮನವಿ ಮಾಡಿಕೊಳ್ಳಿ (ಜಾಮೀನು ಅರ್ಜಿಯ ಮಾದರಿಯನ್ನು ನೋಡಿ)
2. ಜಾಮೀನು ಪಡೆದುಕೊಳ್ಳಲು ಸಿದ್ಧವಾಗಿಟ್ಟುಕೊಳ್ಳ ಬೇಕಾಗಿರುವುದೆಂದರೆ ಜಾಮೀನಿಗಾಗಿ ನಿಲ್ಲುವ ವ್ಯಕ್ತಿಯ ರೇಷನ್ ಕಾರ್ಡ್, ವೇತನ ಚೀಟಿ, ಬ್ಯಾಂಕ್ ಪಾಸ್ ಪುಸ್ತಕ ಅಥವ ಇತರ ಗುರುತಿನ ಪುರಾವೆಗಳು.
3. ಜಾಮೀನಾಗಿ ನಿಲ್ಲಲು ಯಾರು ಇಲ್ಲದಿದ್ದರೆ, ಒಂದಷ್ಟು ಮೊತ್ತವನ್ನು ನ್ಯಾಯಾಲಕ್ಕೆ ಕಟ್ಟಿ ಬಿಡುಗಡೆ ಹೊಂದಬಹುದು.
4. ಜಾಮೀನು ನೀಡಲು ನಿರಾಕರಿಸಿದಲ್ಲಿ ನಿಮಗೆ ಈ ಕೆಳಗಿನ ಕಾರಣಗಳಿಗಾಗಿ ಜಾಮೀನು ಪಡೆಯುವ ಹಕ್ಕಿದೆ :-
   - ☆ 10 ವರ್ಷಗಳಿಗಿಂತ ಕಡಿಮೆ ಅವಧಿಯ ಶಿಕ್ಷೆಗೆ ಒಳಗಾಗಬಹುದಾದ ಅಪರಾಧವಾಗಿದ್ದರೆ ದಸ್ತಗಿರಿಯಾದ 60 ದಿನಗಳೊಳಗೆ ಆರೋಪ ಪಟ್ಟಿಯನ್ನು ಸಲ್ಲಿಸದಿದ್ದರೆ,
   - ☆ 10 ವರ್ಷಗಳಿಗಿಂತ ಹೆಚ್ಚಿನ ಅವಧಿಯ ಶಿಕ್ಷೆಗೆ ಒಳಗಾಗಬಹುದಾದ ಅಪರಾಧವಾಗಿದ್ದು, ದಸ್ತಗಿರಿಯಾದ 90 ದಿನಗಳೊಳಗೆ ಆರೋಪಪಟ್ಟಿಯನ್ನು ಸಲ್ಲಿಸದಿದ್ದರೆ,
   - ☆ ಜಾಮೀನಿನ ಮೊತ್ತ ತುಂಬಾ ಹೆಚ್ಚಿದ್ದರೆ ಕಡಿಮೆಗೊಳಿಸಲು ಮನವಿ ಮಾಡಿಕೊಳ್ಳಿ.

**ಪರಿಪ್ರಶ್ನೆ** ( Interrogations)

1. ನಿಮ್ಮನ್ನು ದಸ್ತಗಿರಿ ಮಾಡಿರಲಿ, ಇಲ್ಲದಿರಲಿ ನಿಮ್ಮನ್ನು ಪ್ರಶ್ನಿಸುವ ಸಮಯದಲ್ಲಿ ನಿಮ್ಮ ವಕೀಲರೊಡನೆ ಆಲೋಚನೆ ಮಾಡಬಹುದು.
2. ಪೊಲೀಸರ ಅಥವ ನ್ಯಾಯಾಧೀಶರ ಮುಂದೆ ತಪ್ಪೊಪ್ಪಿಕೊಳ್ಳಲು ನಿಮ್ಮನ್ನು ಬಲವಂತ ಮಾಡುವಂತಿಲ್ಲ.

**ಚಿತ್ರ ಹಿಂಸೆ**

1. ಚಿತ್ರಹಿಂಸೆ ಕಾನೂನು ಬಾಹಿರ. ನ್ಯಾಯಾಧೀಶರ ಅನುಮತಿ ಇಲ್ಲದೆ ಏಕಾಂತ ಬಂಧನ, ಕಠಿಣ ದುಡಿಮೆ, ಊಟದಲ್ಲಿ ಬದಲಾವಣೆ, ವರ್ಗಾವಣೆ ಸಾಧ್ಯವಿಲ್ಲ.
2. ಚಿತ್ರಹಿಂಸೆಯ ನಂತರ ತಪ್ಪೊಪ್ಪಿಗೆಯನ್ನು ಪಡೆದುಕೊಂಡಿದ್ದರೆ ನ್ಯಾಯಾಧೀಶರಿಗೆ ತಿಳಿಸಿ ಹಿಂತೆಗೆದುಕೊಳ್ಳಿ.
3. ಚಿತ್ರಹಿಂಸೆ, ಹೊಡೆತ ಇತ್ಯಾದಿ ಕುರಿತು ನ್ಯಾಯಾಧೀಶರಿಗೆ ದೂರು ನೀಡಿ. ತಕ್ಷಣವೇ

ವೈದ್ಯಕೀಯ ಪರೀಕ್ಷೆಗಾಗಿ ಕೇಳಿ. ಕಾನೂನು ಬಾಹಿರ ಬಂಧನ ಮತ್ತು ಚಿತ್ರಹಿಂಸೆಗೆ ರಾಜ್ಯಾಧಿಕಾರ ಪರಿಹಾರ ನೀಡಲೇಬೇಕು.

4. ಚಿತ್ರಹಿಂಸೆ, ಹೊಡೆತ ಇತ್ಯಾದಿ ಕುರಿತು ಸಂಬಂಧಪಟ್ಟ ಪೋಲೀಸ್ ಅಧಿಕಾರಿ ಮೇಲೆ ನ್ಯಾಯಾಧೀಶರ ಮುಂದೆ ದೂರು ದಾಖಲಿಸಿ.

**ನ್ಯಾಯಾಲಯದಲ್ಲಿ ಹಾಜರು ಪಡಿಸುವುದು.**

1. ನಿಮ್ಮ ವಿರುದ್ಧ ಕ್ರಮ ಜರುಗಿಸಿರುವ ದಾಖಲೆಗಳ ಸ್ಪುಟವಾದ ಪ್ರತಿಗಳನ್ನು ಪಡೆದುಕೊಳ್ಳುವುದು ನಿಮ್ಮ ಹಕ್ಕು.
2. ನ್ಯಾಯಾಲಯದ ಅಭಿರಕ್ಷೆಯಲ್ಲಿ ಊಟ ಮತ್ತು ಇತರೆ ಮೂಲ ಭೂತ ಸೌಕರ್ಯಗಳನ್ನು ನೀವು ಕೇಳಬಹುದು.
3. ದಸ್ತಗಿರಿಯಾದ 24 ಗಂಟೆಗಳೊಳಗೆ ನಿಮ್ಮನ್ನು ನ್ಯಾಯಾಧೀಶರ ಮುಂದೆ ಹಾಜರು ಪಡಿಸಬೇಕು. ಹಾಜರು ಪಡಿಸದಿದ್ದಲ್ಲಿ ನ್ಯಾಯಾಧೀಶರಿಗೆ ದೂರು ನೀಡಿ.
4. ನಿಮ್ಮ ಗೈರು ಹಾಜರಿಯಲ್ಲಿ ನಿಮ್ಮ ಬಂಧನ ಜಾರಿಗೊಳಿಸುವಂತಿಲ್ಲ.

**ವೈದ್ಯಕೀಯ ಪರೀಕ್ಷೆ**

1. ದಸ್ತಗಿರಿಯಾದಾಗ ತಕ್ಷಣವೆ ವೈದ್ಯಕೀಯ ಪರೀಕ್ಷೆಗಾಗಿ ಮನವಿ ಮಾಡಿಕೊಳ್ಳಿ. ವೈದ್ಯಕೀಯ ಪರೀಕ್ಷಕರು ಎಲ್ಲಾ ಗಾಯಗಳ ವಿವರವನ್ನು ಬರಹ ರೂಪದಲ್ಲಿ ದಾಖಲಿಸತಕ್ಕದ್ದು. ಕರಾರುವಕ್ಕಾಗಿ ಭರ್ತಿ ಮಾಡಿರುವ ಅರ್ಜಿಗೆ ಮಾತ್ರ ಸಹಿ ಮಾಡತಕ್ಕದ್ದು.
2. ಅರ್ಜಿಯ ಪ್ರತಿಯನ್ನು ಕೇಳಿ
3. ಪೋಲೀಸ್ ಕಸ್ಟಡಿ ಜಾರಿಯಾಗುವ ಮುನ್ನ ಆಸ್ಪತ್ರೆಗೆ ಕಳಿಸಲು ನ್ಯಾಯಾಧೀಶರನ್ನು ಕೇಳಿ.
4. ಕಸ್ಟಡಿಯಲ್ಲಿರುವಾಗ ಪ್ರತಿ 48 ಗಂಟೆಗಳಿಗೊಮ್ಮೆ ವೈದ್ಯಕೀಯ ಪರೀಕ್ಷೆ ಮಾಡಬೇಕು.
5. ನೀವು 18 ವಯಸ್ಸಿನೊಳಗಿನವರಾದರೆ, ನಿಮ್ಮ ವಯಸ್ಸನ್ನು ತಪ್ಪಾಗಿ ದಾಖಲಿಸಿದ್ದರೆ, ನಿಮ್ಮ ವಯಸ್ಸನ್ನು ಖಚಿತಪಡಿಸುವ ದಾಖಲೆಗಳು ಇಲ್ಲದಿದ್ದರೆ, ನಿಮ್ಮ ವಯಸ್ಸನ್ನು ಖಚಿತಪಡಿಸಲು ವೈದ್ಯಕೀಯ ಪರೀಕ್ಷೆಗಾಗಿ ಒತ್ತಾಯಿಸಿ.
6. ಖಾಯಿಲೆ ಇದ್ದ ಪಕ್ಷದಲ್ಲಿ ವೈದ್ಯಕೀಯ ಚಿಕಿತ್ಸೆಗಾಗಿ ಅರ್ಜಿ ಹಾಕಿ.

**ಹೆಚ್.ಐ.ವಿ/ಮಾರಣಾಂತಿಕ ಖಾಯಿಲೆಗಳು**

ಅವಧಿ ಪೂರ್ವ ಬಿಡುಗಡೆಗಾಗಿ ಕೇಳಬಹುದು.

(ಆಧಾರ : ಹ್ಯೂಮನ್ ರೈಟ್ಸ್ ಲಾ ನೆಟ್‌ವರ್ಕ್/ ಲಾಯರ್ಸ್ ಕಲೆಕ್ಟೀವ್‌ನವರು ತಯಾರಿಸಿದ 'ನೋ ಯುವರ್ ರೈಟ್ಸ್' ಪೋಸ್ಟರ್)

# ಮೊಕದ್ದಮೆ ಕುರಿತ ಮಾದರಿ ಜಾಮೀನು ಅರ್ಜಿ

ಹೆಚ್ಚುವರಿ ಮುಖ್ಯ ಮಹಾನಗರ ದಂಡಾಧಿಕಾರಿಯವರ ನ್ಯಾಯಾಲಯದಲ್ಲಿ

ಬೆಂಗಳೂರು

ಅಪರಾಧ ಸಂಖ್ಯೆ 2003

ನಡುವೆ :

**ಕರ್ನಾಟಕ ರಾಜ್ಯ ಸರ್ಕಾರ**

ಪ್ರತಿನಿಧಿಸುವವರು

(ಪೋಲೀಸ್ ಠಾಣೆ ............ ಫಿರ್ಯಾದಿ

ಮತ್ತು :

(ಆರೋಪಿ ಹೆಸರು) ............ ಆರೋಪಿ

ಅಪರಾಧ ದಂಡ ಸಂಹಿತೆಯ ಸೆಕ್ಷನ್ 436ರಡಿ ಮೇಲೆ ಹೆಸರಿಸಿರುವ ಆರೋಪಿಯು ನಿರೂಪಿಸುವುದೇನೆಂದರೆ :

1. ಫಿರ್ಯಾದಿಯು ಐಟಿಪಿಎ ಕಾಯ್ದೆ 1956ರ ಸೆಕ್ಷನ್ 8 (ಬಿ) ಅನ್ವಯ ಶಿಕ್ಷಾರ್ಹವಾದ ಅಪರಾಧಕ್ಕಾಗಿ ಮೇಲೆ ತಿಳಿಸಿರುವ ಅಪರಾಧ ಸಂಖ್ಯೆಯಡಿ ಆರೋಪಿಯ ಮೇಲೆ ಮೊಕ್ಕದ್ದಮೆ ನೊಂದಾಯಿಸಿದ್ದಾರೆ.
2. ಆರೋಪಿಯು ಕೆಳ ಸಾಮಾಜಿಕ-ಆರ್ಥಿಕ ಶ್ರೇಣಿಯಿಂದ ಬಂದವರಾಗಿದ್ದು ಆಕೆಗೆ ಯಾವುದೇ ಸಾಮಾಜಿಕ ಮತ್ತು ಆರ್ಥಿಕ ಬೆಂಬಲವಿಲ್ಲ. ಆಕೆಗೆ ಜಾಮೀನನ್ನು ನಿರಾಕರಿಸಿದರೆ ಆಕೆ ಹೆಚ್ಚಿನ ಸಂಕಷ್ಟಕ್ಕೆ ಒಳಗಾಗಬೇಕಾಗುತ್ತದೆ.
3. ಆಕೆ ಮುಗ್ಧೆಯಾಗಿದ್ದು, ಆಕೆಯ ಮೇಲೆ ಆರೋಪಿಸಲಾದ ಯಾವ ಅಪರಾಧವನ್ನು ಮಾಡಿಲ್ಲ. ಜಾಮೀನಿನ ಮೇಲಿನ ವಿಸ್ತರಣೆ ಕೋರಿ ಆರೋಪಿಯು ಈ ಅರ್ಜಿಯನ್ನು ತಯಾರಿಸಿದ್ದಾರೆ.
4. ಆರೋಪಿಯು ಮಾಡಿದ್ದಾರೆನ್ನಲಾದ ಯಾವ ಅಪರಾಧವೂ ಮರಣ ಅಥವ ಜೀವನ ಪರ್ಯಂತ ಶಿಕ್ಷೆಗೆ ಅರ್ಹವಾದವಲ್ಲ. ಆರೋಪಿಯ ಮೇಲೆ ಆರೋಪಿಸಲಾದ ಯಾವ ಅಪರಾಧಗಳು ಜಾಮೀನು ನೀಡಬಹುದಾದವು. ಮರಣದಂಡನೆ ಅಥವ ಜೀವನ ಪರ್ಯಂತ ಶಿಕ್ಷೆಗೆ ಒಳಗಾಗುವಂತಹ ಯಾವ ಅಪರಾಧವನ್ನು ಆರೋಪಿಯು ಈ ಹಿಂದೆ ಮಾಡಿಲ್ಲ.

5. ಈ ಅರ್ಜಿಯನ್ನು ಪುರಸ್ಕರಿಸಿದಲ್ಲಿ ಫಿರ್ಯಾದಿಗೆ ಯಾವ ಪ್ರತಿಕೂಲ ಪರಿಣಾಮ ಉಂಟಾಗದು, ಆದರೆ ಅದನ್ನೇ ತಿರಸ್ಕರಿಸಿದಲ್ಲಿ ಆರೋಪಿಗೆ ಹೇಳಲಸಾಧ್ಯವಾದ ಸಂಕಷ್ಟ ಮತ್ತು ಹಾನಿಯುಂಟಾಗುವುದು. ಗೌರವಾನ್ವಿತ ನ್ಯಾಯಾಲಯವು ಈ ಅರ್ಜಿಯನ್ನು ಸಮ್ಮತಿಸದಿದ್ದರೆ ಆರೋಪಿಯು ಸಂಕಷ್ಟಕ್ಕೆ ಗುರಿಯಾಗುವರು.
6. ಸುನಾವಣೆಯ (Hearing) ಎಲ್ಲ ದಿನಾಂಕಗಳಂದು ಈ ಗೌರವಾನ್ವಿತ ನ್ಯಾಯಾಲಯದ ಮುಂದೆ ಹಾಜರಾಗುವ ಜವಾಬ್ದಾರಿಯನ್ನು ಆರೋಪಿಯು ತೆಗೆದುಕೊಳ್ಳುತ್ತಾರೆ. ಹಾಗಾಗಿ ವೈಯಕ್ತಿಕ ಮುಚ್ಚಳಿಕೆಯ ಮೇಲೆ ಆಕೆಗೆ ಜಾಮೀನು ನೀಡಬೇಕೆಂದು ಬೇಡಿಕೊಳ್ಳುತ್ತೇನೆ.

   ಆದ್ದರಿಂದ ಗೌರವಾನ್ವಿತ ನ್ಯಾಯಾಲಯವು ನ್ಯಾಯದ ಉದ್ದೇಶಕ್ಕಾಗಿ ಅಪರಾಧ ಸಂಖ್ಯೆ-2003ಕ್ಕಾಗಿ ಆಕೆಯನ್ನು ಜಾಮೀನಿನ ಮೇಲೆ ಬಿಡುಗಡೆ ಗೊಳಿಸಲಚ್ಚಿಸಬೇಕೆಂದು ಆರೋಪಿಯು ಕೋರುತ್ತಾರೆ.

ಬೆಂಗಳೂರು (ಆರೋಪಿ ಪರ ವಕೀಲರು)

ದಿನಾಂಕ :

# ಜಮೀನುದಾರರ ಶಪಥ ಪತ್ರ

ಹೆಚ್ಚುವರಿ ಮುಖ್ಯ ಮಹಾನಗರ ದಂಡಾಧಿಕಾರಿಯವರ ನ್ಯಾಯಾಲಯದಲ್ಲಿ

ಬೆಂಗಳೂರು

ಅಪರಾಧ ಸಂಖ್ಯೆ 2003

ನಡುವೆ :

**ಕರ್ನಾಟಕ ರಾಜ್ಯ ಸರ್ಕಾರ**

ಪ್ರತಿನಿಧಿಸುವವರು

(ಪೋಲೀಸ್ ಠಾಣೆ ............. ಪಿರ್ಯಾದಿ

ಮತ್ತು :

(ಆರೋಪಿ ಹೆಸರು) ............. ಆರೋಪಿ

ಜಾಮೀನುದಾರರ ಹೆಸರು .............

ವಿಳಾಸ .............

**ಜಾಮೀನುದಾರರ ಶಪಥ ಪತ್ರ**

ಆರ್.ಎನ್.ರವರ ಮಗನಾದ ಎಸ್.ಎನ್. ಆದ ಕ್ಷೇತ್ರ ಅಧಿಕಾರಿಯಾಗಿ................... ನಲ್ಲಿರುವ ............................ಯಲ್ಲಿ ಕೆಲಸ ಮಾಡುತ್ತಿರುವ ನಾನು ಈ ಮೂಲಕ ಶ್ರದ್ಧಾಪೂರ್ವಕವಾಗಿ ಪ್ರಮಾಣ ಮಾಡಿ ನಿವೇದಿಸುವುದೇನೆಂದರೆ :-

1. ನನಗೆ ಆರೋಪಿಯ ಪರಿಚಯವಿದೆ. ಆಕೆಯನ್ನು ಜಾಮೀನಿನ ಮೇಲೆ ಬಿಡುಗಡೆ ಮಾಡಲು ಈ ಗೌರವಾನ್ವಿತ ನ್ಯಾಯಾಲಯದಲ್ಲಿ ಜಾಮೀನುದಾರನಾಗಿ ನಿಲ್ಲಲು ಸಿದ್ಧನಿದ್ದೇನೆ.
2. ಕರೆ ನೀಡಿದಾಗ ತನಿಖಾಧಿಕಾರಿಯ ಮುಂದೆ ಆರೋಪಿಯನ್ನು ಸುನಾವಣೆಯ ದಿನಾಂಕಗಳಂದು ಈ ಗೌರವಾನ್ವಿತ ನ್ಯಾಯಾಲಯದಲ್ಲಿ ಹಾಜರುಪಡಿಸುವ ಜವಾಬ್ದಾರಿಯನ್ನು ತೆಗೆದುಕೊಳ್ಳುತ್ತೇನೆ.
3. ನಾನು (ಸಾಲ ತೀರಿಸಬಲ್ಲ) ಧನಾನುಕೂಲವಿರುವವ. ನಾನು ಕ್ಷೇತ್ರಾಧಿಕಾರಿ...... ಬ್ಯಾಂಕಿನಲ್ಲಿ ಮಾಸಿಕ ವೇತನ.... ರೂ.... ಪಡೆಯುತ್ತೇನೆ. ವೇತನ ಪಟ್ಟಿ/ ಪಾಸ್‌ಪುಸ್ತಕ/ ರೇಷನ್ ಕಾರ್ಡ್ ಪೋಟೋ ಕಾಪಿ ಪ್ರತಿಯನ್ನು ಇದರೊಂದಿಗೆ ಲಗತ್ತಿಸಿದ್ದು ಅನುಬಂಧ 'ಎ' ನಲ್ಲಿ ತೋರಿಸಲಾಗಿದೆ.

ಎಸ್.ಎನ್. ಆದ ನಾನು ಶ್ರದ್ಧಾಪೂರ್ವಕವಾಗಿ ಹಾಗೂ ಪ್ರಾಮಾಣಿಕವಾಗಿ ನನ್ನ ಹೆಸರು ಮತ್ತು ಸಹಿ ಹಾಗೂ ಮೇಲೆ ತಿಳಿಸಿರುವುದೆಲ್ಲವೂ ನನ್ನ ಜ್ಞಾನ, ಮಾಹಿತಿ ಮತ್ತು ನಂಬಿಕೆಗನುಗುಣವಾಗಿ ನಿಜವೆಂದು ಘೋಷಿಸುತ್ತೇನೆ.

ನನ್ನಿಂದ ಗುರುತಿಸಲ್ಪಟ್ಟಿದೆ.

**ಸಾಕ್ಷಿ ಧಾರ** ವಕೀಲರು

ಬೆಂಗಳೂರು

ದಿನಾಂಕ

# ನಗದು ಜಾಮೀನು ಸಲ್ಲಿಸಲು ಅರ್ಜಿ

ಹೆಚ್ಚುವರಿ ಮುಖ್ಯ ಮಹಾನಗರ ದಂಡಾಧಿಕಾರಿಯವರ ನ್ಯಾಯಾಲಯದಲ್ಲಿ

ಬೆಂಗಳೂರು

ಅಪರಾಧ ಸಂಖ್ಯೆ 2003

ನಡುವೆ :

**ಕರ್ನಾಟಕ ರಾಜ್ಯ ಸರ್ಕಾರ**

ಪ್ರತಿನಿಧಿಸುವವರು

(ಪೊಲೀಸ್ ಠಾಣೆ ............. ಪಿರ್ಯಾದಿ

ಮತ್ತು :

(ಆರೋಪಿ ಹೆಸರು) ............. ಆರೋಪಿ

ಅಪರಾಧ ದಂಡಸಂಹಿತೆ ಸೆಕ್ಷನ್ 445ರ ಪ್ರಕಾರ ಆರೋಪಿಯ ಪರವಾಗಿ ಅರ್ಜಿಯನ್ನು ದಾಖಲಿಸಲಾಗಿದೆ.

ಮೇಲೆ ಸೂಚಿಸಿರುವ ಆರೋಪಿಯು ಗೌರವಪೂರ್ವಕವಾಗಿ ನಿವೇದಿಸುವುದೇನೆಂದರೆ :

ಐ.ಟಿ.ಪಿ.ಎ. ಕಾಯ್ದೆ 1956ರ ಸೆಕ್ಷನ್ 8 (ಬಿ) ಅನ್ವಯದ ಅಪರಾಧಕ್ಕಾಗಿ ನ್ಯಾಯಾಂಗ ಬಂಧನದಲ್ಲಿರುವ ಆರೋಪಿಯು, ಆಕೆಯ, ಬಿಡುಗಡೆಗಾಗಿ ಜಾಮೀನು ವ್ಯವಸ್ಥೆ ಮಾಡುವ ಸ್ಥಿತಿಯಲ್ಲಿಲ್ಲ. ಮೇಲೆ ಹೆಸರಿಸಿರುವ ಆರೋಪಿಯನ್ನು ಜಾಮೀನುದಾರರ ಬದಲಿಗೆ ನಗದು ಜಾಮೀನನ್ನು ಒಪ್ಪಿಸಿಕೊಂಡು ಬಿಡುಗಡೆ ಗೊಳಸಿಬೇಕೆಂದು ಮತ್ತು ಗೌರವಯುತ ನ್ಯಾಯಾಲಯದ ಮುಂದೆ ನಿಯಮಿತವಾಗಿ ಹಾಜರಾಗುವುದನ್ನು ಆಕೆ ಖಾತ್ರಿಪಡಿಸಬೇಕೆಂದು ನ್ಯಾಯ ಮತ್ತು ಸಮಾನತೆಯ ಉದ್ದೇಶಕ್ಕಾಗಿ ಬೇಡಿಕೊಳ್ಳುತ್ತೇನೆ.

ಬೆಂಗಳೂರು

ದಿನಾಂಕ ......................... (ಆರೋಪಿ ಪರ ವಕೀಲರು.)

# ಮಾದರಿ ಪ್ರಥಮ ಮಾಹಿತಿ ವರದಿ (ಎಫ್.ಐ.ಆರ್.)

ಗೆ,

ಕರ್ತವ್ಯನಿರತ ಪ್ರಭಾರ ಅಧಿಕಾರಿ
ಪೊಲೀಸ್‌ಠಾಣೆ
ನಗರ/ಜಿಲ್ಲೆ
ರಾಜ್ಯ

ವಿಷಯ : (ಒಂದು ಸಾಲಿನ ಉಲ್ಲಂಘನಾ ಹೇಳಿಕೆ)

1. ಏನು ನಡೆಯಿತು, ಯಾವ ವೇಳೆಯಲ್ಲಿ ನಡೆಯಿತು, ಯಾವ ದಿನಾಂಕದಂದು ನಡೆಯಿತು ಮತ್ತು ಯಾವ ಸ್ಥಳದಲ್ಲಿ ನಡೆಯಿತು ಎಂಬ ಸಂಗತಿಗಳ ಹೇಳಿಕೆ
2. ಅಪರಾಧ ಹೇಗೆ ಜರುಗಿತು ಎಂಬುದರ ವಿವರಣೆ
3. ಅಪರಾಧ ಮಾಡಿದ ವ್ಯಕ್ತಿಯ ಉಡುಪು, ಆತ ಬಳಸಿದ ವಾಹನ (ಲೈಸನ್ಸ್ ನಂ) ಲಭ್ಯವಿದ್ದರೆ ಹೆಸರು ಮತ್ತು ವಿಳಾಸ, ಆಯುಧಗಳನ್ನು ಬಳಸಿದ್ದರೆ ಯಾವ ಆಯುಧಗಳನ್ನು ಬಳಸಲಾಗಿತ್ತು ಎಂಬುದರ ವಿವರಣೆ
4. ಜರುಗಿದ ಅಪರಾಧಗಳೇನು ಎಂಬುದರ ಹೇಳಿಕೆ-ಕೊಲೆ-ಸುಲಿಗೆ ಇತ್ಯಾದಿ
5. ಸಾಧ್ಯವಾದರೆ ಭಾರತೀಯ ದಂಡ ಸಂಹಿತೆಯ ಯಾವ ಸೆಕ್ಷನ್ ಅನ್ನು ಉಲ್ಲಂಘಿಸಲಾಗಿದೆ ಎಂಬುದು.
6. ಹೇಳಿಕೆಯನ್ನು ತಯಾರಿಸಿದ ವ್ಯಕ್ತಿಯು ಎಫ್.ಐ.ಆರ್.ಗೆ ಸಹಿ ಮಾಡಬೇಕು.
7. ಎಷ್ಟು ಬೇಗ ಸಾಧ್ಯವೋ ಅಷ್ಟು ಬೇಗ ಎಫ್.ಐ.ಆರ್.ಅನ್ನು ನೊಂದಾಯಿಸಬೇಕು ಮತ್ತು ಅದರ ಪ್ರತಿಯನ್ನು ಕರ್ತವ್ಯ ನಿರತ ಪ್ರಭಾರ ಅಧಿಕಾರಿಯಿಂದ ಪಡೆಯಬೇಕು.

# ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗದ ಅಧಿಕಾರಗಳು

ಆರ್ಟಿಕಲ್ 12 : ಆಯೋಗದ ಕಾರ್ಯಗಳು ( ಮಾನವ ಹಕ್ಕುಗಳ ರಕ್ಷಣಾ ಕಾಯ್ದೆ)

ಆಯೋಗವು ಈ ಕೆಳಗಿನ ಎಲ್ಲ ಅಥವ ಯಾವುದೇ ಕಾರ್ಯಗಳನ್ನು ಮಾಡತಕ್ಕದ್ದು, ಅವು ಯಾವುವೆಂದರೆ:

a. ಕೋರ್ಟು ತಾನಾಗಿಯೇ ತೆಗೆದುಕೊಂಡ ಕೇಸು (Suomotu) ಅಥವ ತೊಂದರೆಗೊಳಗಾದವರು ನೀಡಿದ ಅಥವ ಅವರ ಪರವಾಗಿ ಯಾವುದೇ ವ್ಯಕ್ತಿ ನೀಡಿದ ಅರ್ಜಿ ಹಾಗು ಈ ಕೆಳಗಿನ ಕುರಿತ ದೂರುಗಳನ್ನು ವಿಚಾರಣೆ ಮಾಡಬಹುದು.

**ಸಾರ್ವಜನಿಕ ಸೇವಕರಿಂದ :**

1. ಮಾನವ ಹಕ್ಕುಗಳ ಉಲ್ಲಂಘನೆ ಅಥವ ದುಷ್ಪ್ರೇರಣೆಗೆ ಅಥವ

11. ಅಂತಹ ಉಲ್ಲಂಘನೆಯನ್ನು ತಡೆಯಲು ತೋರಿದ ನಿರ್ಲಕ್ಷ್ಯ

b. ಕೋರ್ಟಿನಲ್ಲಿ ಇತ್ಯರ್ಥವಾಗದಿರುವ, ಯಾವುದೇ ಮಾನವ ಹಕ್ಕುಗಳ ಉಲ್ಲಂಘನೆಯ ಆಪಾದನೆಯನ್ನು ಒಳಗೊಂಡಿರುವ ಪ್ರಕ್ರಿಯೆಯಲ್ಲಿ, ಆ ಕೋರ್ಟಿನ ಅನುಮತಿಯೊಂದಿಗೆ ಮಧ್ಯ ಪ್ರವೇಶಿಸುವುದು;

c. ರಾಜ್ಯ ಸರ್ಕಾರಕ್ಕೆ ತಿಳಿಸಿ ಚಿಕಿತ್ಸೆ, ಸುಧಾರಣೆ ಅಥವ ರಕ್ಷಣೆಗಾಗಿ ವ್ಯಕ್ತಿಗಳನ್ನು ಬಂಧಿಸಿರುವ ಅಥವ ಇರಿಸಿರುವ ಯಾವುದೇ ಜೈಲು ಅಥವ ಇತರ ಯಾವುದೇ ರಾಜ್ಯ ಸರ್ಕಾರದ ನಿಯಂತ್ರಣದಲ್ಲಿರುವ ಸಂಸ್ಥೆಗೆ ಅಲ್ಲಿರುವ ನಿವಾಸಿಗಳು ಬದುಕುತ್ತಿರುವ ಪರಿಸ್ಥಿತಿಯನ್ನು ಅಧ್ಯಯನ ಮಾಡಲು ಮತ್ತು ಶಿಫಾರಸ್ಸುಗಳನ್ನು ಮಾಡಲು ಭೇಟಿ ನೀಡುವುದು:

d. ಮಾನವ ಹಕ್ಕುಗಳ ರಕ್ಷಣೆಗಾಗಿ, ಸಂವಿಧಾನ ಅಥವ ಯಾವುದೇ ಕಾನೂನು- ಇಂದ ಅಥವ ಅಡಿಯಲ್ಲಿ ನೀಡಲಾದ ರಕ್ಷಣೋಪಾಯಗಳ ಪುನರಾವಲೋಕನ ಮತ್ತು ಅವುಗಳನ್ನು ಪರಿಣಾಮಕಾರಿಯಾಗಿ ಜಾರಿಗೊಳಿಸುವ ವಿಧಾನಗಳನ್ನು ಶಿಫಾರಸ್ಸು ಮಾಡುವುದು:

e. ಭಯೋತ್ಪಾದನೆಯು ಸೇರಿದಂತೆ ಮಾನವ ಹಕ್ಕುಗಳನ್ನು ಅನುಭವಿಸಲು ಅಡ್ಡಿಯಾಗುವ ಚಟುವಟಿಕೆಗಳನ್ನು ಪುನರಾವಲೋಕಿಸಿ ಸೂಕ್ತ ಪರಿಹಾರೋಪಾಯಗಳನ್ನು ಶಿಫಾರಸ್ಸು ಮಾಡುವುದು:

f. ಮಾನವ ಹಕ್ಕುಗಳ ಕುರಿತ ಒಪ್ಪಂದಗಳು ಮತ್ತು ಇತರ ಅಂತರರಾಷ್ಟ್ರೀಯ ಉಪಕರಣಗಳನ್ನು ಅಧ್ಯಯನ ಮಾಡಿ.

ಅವುಗಳನ್ನು ಪರಿಣಾಮಕಾರಿಯಾಗಿ ಜಾರಿಗೊಳಿಸಲು ಶಿಫಾರಸ್ಸುಗಳನ್ನು ಮಾಡುವುದು.

g. ಮಾನವ ಹಕ್ಕುಗಳ ಕ್ಷೇತ್ರದಲ್ಲಿ ಸಂಶೋಧನೆಯನ್ನು ಕೈಗೊಳ್ಳುವುದು, ಪ್ರೋತ್ಸಾಹಿಸುವುದು;

h. ಸಮಾಜದ ಹಲವಾರು ಭಾಗಗಳಲ್ಲಿ ಮಾನವ ಹಕ್ಕುಗಳ ಅರಿವನ್ನು ಹರಡುವುದು ಮತ್ತು ಪ್ರಕಟಣೆಗಳು, ಮಾಧ್ಯಮ, ವಿಚಾರ ಸಂಕಿರಣ ಹಾಗು ಲಭ್ಯವಿರುವ ಇತರ ವಿಧಾನಗಳ ಮೂಲಕ ಮಾನವ ಹಕ್ಕುಗಳ ರಕ್ಷಣೆಗಾಗಿ ಲಭ್ಯವಿರುವ ರಕ್ಷಣೋಪಾಯಗಳ ಕುರಿತು ಅರಿವು ಮೂಡಿಸಲು ಪ್ರೋತ್ಸಾಹಿಸುವುದು;

i. ಮಾನವ ಹಕ್ಕುಗಳ ಕ್ಷೇತ್ರದಲ್ಲಿ ಕೆಲಸ ಮಾಡುತ್ತಿರುವ ಸರ್ಕಾರೇತರ ಸಂಘ, ಸಂಸ್ಥೆಗಳ ಪ್ರಯತ್ನಗಳನ್ನು ಪ್ರೋತ್ಸಾಹಿಸುವುದು;

j. ಮಾನವ ಹಕ್ಕುಗಳ ರಕ್ಷಣೆಗಾಗಿ ಅಗತ್ಯವೆನಿಸುವ ಇತರೆ ಕಾರ್ಯಗಳು.

# ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗಕ್ಕೆ ಕಿರುಕುಳ ಕುರಿತು ಬರೆದ ಮಾದರಿ ಪತ್ರ

ಕಿರುಕುಳ ಕುರಿತು ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗೆ ಬರೆದ ಮಾದರಿ ಪತ್ರ

ದಿನಾಂಕ

ಅಧ್ಯಕ್ಷರು
ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗ
ಸರ್ದಾರ್ ಪಟೇಲ್ ಭವನ್ ಸಂಸದ್ ಮಾರ್ಗ
ನ್ಯೂಡೆಲ್ಲಿ–1110001

ವಿಷಯ : ಜೀವ ಬೆದರಿಕೆ ಮತ್ತು ಸುರಕ್ಷತೆಗೆ
ಧಕ್ಕೆಯಾಗುವ ಸಂಶಯ

ಮಾನ್ಯರೆ,

ಜ್ಯೋತಿ ಎಂಬುವವರು ಹೆಚ್.ಐ.ವಿ./ ಏಡ್ಸ್ ತಡೆ ಬಗ್ಗೆ ಸಾರ್ವಜನಿಕರಿಗೆ ಅರಿವು ಮೂಡಿಸುವ ಕೆಲಸದಲ್ಲಿ ತೊಡಗಿದ್ದಾರೆ. ಅವರಿಂದ ಮೌಖಿಕ ದೂರು ಬಂದಿದ್ದು, ದೂರಿನಲ್ಲಿ ಅವರು, ಅವರ ಜೀವಕ್ಕೆ ಮತ್ತು ಸುರಕ್ಷತೆಗೆ ಧಕ್ಕೆ ಇದೆ ಎಂದು ಹೇಳಿದ್ದಾರೆ. ದೂರಿನಲ್ಲಿ ತಿಳಿಸಿರುವ ವಿಷಯ ಹೀಗಿದೆ :

1. ಜ್ಯೋತಿಯವರು ಸ್ವಯಂಸೇವಕರು ಮತ್ತು ಲೈಂಗಿಕ ಕಾರ್ಮಿಕರ ಹಕ್ಕುಗಳ ವೇದಿಕೆಯಲ್ಲಿ ಸಕ್ರಿಯ ಸದಸ್ಯರು ಆಗಿದ್ದಾರೆ. ಆಕೆ ಮುಖ್ಯವಾಗಿ ಹೆಚ್.ಐ.ವಿ./ ಏಡ್ಸ್ ತಡೆಗಟ್ಟುವ, ಮಧ್ಯಸ್ಥಿಕೆವಹಿಸುವ ಕಾರ್ಯಕ್ರಮಗಳನ್ನು ರಚಿಸುವ ನೆಟ್‌ವರ್ಕ್‌ನ ಭಾಗವಾಗಿ ಕೆಲಸ ಮಾಡುತ್ತಿದ್ದಾರೆ. ಹಿಜ್ರಾಗಳು ಮತ್ತು ಕೋಥಿಗಳನ್ನು ಸಂಘಟಿಸುವಂತಹ, ಹೆಚ್.ಐ.ವಿ./ ಏಡ್ಸ್ ಕುರಿತ ಮಾಹಿತಿಯನ್ನು ಪ್ರಚಾರ ಮಾಡುವಂತಹ ಹಲವಾರು ಚಟುವಟಿಕೆಗಳಲ್ಲಿ ಆಕೆ ತೊಡಗಿಕೊಂಡಿದ್ದಾರೆ. ಹಿಜ್ರಾ ಮತ್ತು ಕೋಥಿ ಲೈಂಗಿಕ ಕಾರ್ಮಿಕರನ್ನು ಹೆಚ್.ಐ.ವಿ./ ಏಡ್ಸ್ ಹರಡುವುದನ್ನು ತಡೆಯಲು ಮತ್ತು ಅವರ ಮೇಲಾಗುತ್ತಿರುವ ಹಿಂಸೆಯನ್ನು ತಡೆಯಲು ಸಂಘಟಿಸುವುದರಲ್ಲಿ ಆಕೆ ಮಹತ್ತರವಾದ ಪಾತ್ರವಹಿಸಿದ್ದಾರೆ.

2. ದಿನಾಂಕ– ರಂದು ಮನೆಗೆ ಹಿಂತಿರುಗುವ ಸಲುವಾಗಿ ಜ್ಯೋತಿ ಅವರು ಬಸ್ಸಿಗಾಗಿ ಕಾಯುತ್ತಿದ್ದರು. ಉಪ್ಪಾರಪೇಟೆಯ ಪೋಲಿಸರು ಆಕೆಯನ್ನು ದಸ್ತಗಿರಿ ಮಾಡಿ PITA (Prevention of Immoral Trafficking in Persons Act · ವ್ಯಕ್ತಿಯ ಅನೈತಿಕ ಸಾಗಣಿ ತಡೆ ಕಾಯ್ದೆ) ಕಾಯ್ದೆ 1986 ಸೆಕ್ಷನ್ 8(b)ಯಡಿ ಸುಳ್ಳು ಆರೋಪ ಮಾಡಿದ್ದಾರೆ. ಜ್ಯೋತಿಯವರು ದಸ್ತಗಿರಿಯನ್ನು ಪ್ರಶ್ನಿಸಿದ್ದಾರೆ.

3. ದಸ್ತಗಿರಿಯನ್ನು ಪ್ರಶ್ನಿಸಿರುವ ಕಾರಣಕ್ಕೆ ಜ್ಯೋತಿಯವರು ಬೇಗಂ ಪೇಟೆಯ ಪೋಲೀಸರ ಕೆಂಗಣ್ಣಿಗೆ ಗುರಿಯಾಗಿದ್ದಾರೆ. ಪೋಲೀಸರು ಇಚ್ಛಾನುಸಾರವಾಗಿ ಮಾಡಿರುವ ದಸ್ತಗಿರಿಯನ್ನು ಜ್ಯೋತಿಯು ಪ್ರಶ್ನಿಸಿದ ಕಾರಣಕ್ಕೆ ಪೋಲಸರು ಆಕೆಯ ಮೇಲೆ ಕೋಪಗೊಂಡಿದ್ದಾರೆ. ಘೋರ ಪರಿಣಾಮಕ್ಕೆ ಗುರಿಯಾಗಬೇಕಾಗುತ್ತದೆ ಎಂದು ಬೆದರಿಸಿದ್ದಾರೆ. ಗಾಂಜಾ ಇರಿಸಿ ಎನ್‌ಡಿಪಿಎಸ್ ಕಾಯ್ದೆಯಡಿ ಸುಳ್ಳು ಆರೋಪ ಹೊರಿಸಿ ಸಿಗಿಸುವುದಾಗಿ ಪಣತೊಟ್ಟಿದ್ದಾರೆ.

4. ಇದನ್ನು ಜ್ಯೋತಿ ತಮ್ಮ ವಕೀಲರ ಮೂಲಕ ನ್ಯಾಯಾಧೀಶರ ಮುಂದೆ ಹೇಳಿದರು. ನಂತರ ನ್ಯಾಯಾಧೀಶರು ಪಾಪದ ಹೆಂಗಸನ್ನು ಬೆದರಿಸಿದ್ದೇಕೆಂದು ಉಪ್ಪಾರಪೇಟೆ ಪೋಲೀಸರನ್ನು ಕೇಳಿದರು ಮತ್ತು ಆ ರೀತಿ ಬೆದರಿಸಬಾರದೆಂದು ಎಚ್ಚರಿಕೆ ನೀಡಿದರು.

5. ಜ್ಯೋತಿಗೆ ಈಗ ಸಂಶಯ ಹೆಚ್ಚಾಗಿದೆ ಮತ್ತು ಆಕೆಯ ಜೀವ ಮತ್ತು ಸುರಕ್ಷತೆ ಕುರಿತು ಭೀತಿಯುಂಟಾಗಿದೆ. ಈ ವಿಷಯದಲ್ಲಿ ತಾವು ಬೇಗಂಪೇಟೆಯ ಎಸಿಪಿಯವರೂ ಸೇರಿದಂತೆ ಸಂಬಂಧಪಟ್ಟ ಪೋಲೀಸರಿಗೆ ಯಾವುದೇ ರೀತಿಯ ಕಾನೂನು ವಿರೋಧಿ ಕೆಲಸಗಳನ್ನು ಮತ್ತು ಜ್ಯೋತಿಯನ್ನು ಬೆದರಿಸುವುದನ್ನು ಮಾಡಬಾರದೆಂದು ಅಪ್ಪಣೆ ನೀಡಬೇಕೆಂದು ತಮ್ಮಲ್ಲಿ ಬೇಡಿಕೊಳ್ಳುತ್ತೇವೆ.

6. ಆ ರೀತಿ ಮಾಡುವ ಮೂಲಕ ಬೇಗಂ ಪೇಟೆ ಪೋಲೀಸರಿಂದಾಗಬಹುದಾದ ಯಾವುದೇ ನಿರಂಕುಶ ಕೆಲಸ ಹಾಗೂ ಹಿಂಸೆಯನ್ನು ತಡೆದು ಜ್ಯೋತಿಗೆ ಸುರಕ್ಷತೆಯ ಮತ್ತು ಭದ್ರತೆಯ ಭರವಸೆ ನೀಡಿದರೆ ನಾವು ನಿಮಗೆ ಋಣಿಯಾಗಿರುತ್ತೇವೆ.

ತಮ್ಮ ವಿಧೇಯರು

ಮಾಹಿತಿ ಮತ್ತು ಸೂಕ್ತ ಕ್ರಮ ಜರುಗಿಸಲು ಪ್ರತಿಗಳನ್ನು ಕೆಳಗಿನವರಿಗೆ ನೀಡಲಾಗಿದೆ.

1. ಮಾನ್ಯ ಗೃಹಮಂತ್ರಿಗಳು, ಕರ್ನಾಟಕ
2. ಮಾನ್ಯ ಅಧ್ಯಕ್ಷರು ಕರ್ನಾಟಕ ಮಹಿಳಾ ಆಯೋಗ – ಕರ್ನಾಟಕ
3. ಪೋಲಿಸ್ ಮಹಾನಿರ್ದೇಶಕರು ನೃಪತುಂಗ ರಸ್ತೆ, ಬೆಂಗಳೂರು ಕರ್ನಾಟಕ
4. ಪೊಲೀಸ್ ಉಪ–ಆಯುಕ್ತರು, ಬೆಂಗಳೂರು (ನಿಮ್ಮ ಕ್ಷೇತ್ರ)
5. ಸಹಾಯಕ ಪೋಲೀಸ್ ಆಯುಕ್ತರು, ಬೇಗಂ ಪೇಟೆ, ಬೆಂಗಳೂರು (ನಿಮ್ಮ ಕ್ಷೇತ್ರ)
6. ಪೋಲೀಸ್ ಆಯುಕ್ತರು
7. ಇನ್‌ಸ್ಪೆಕ್ಟರ್ ಜನರಲ್ ಆಫ್ ಪೋಲೀಸ್
8. ರಾಜ್ಯಪಾಲರು – ಕರ್ನಾಟಕ

ಮೇಲೆ ತಿಳಿಸಿರುವ ಎಲ್ಲರಿಗೂ ಪತ್ರದ ಪ್ರತಿ ಹೋಗಿರುವುದನ್ನು ಖಚಿತ ಪಡಿಸಿಕೊಳ್ಳಿ. ಇದರಿಂದ ಅಧಿಕಾರದ ಎಲ್ಲ ಹಂತಗಳನ್ನು ಸಂಪರ್ಕಿಸಲಾಗಿದೆ ಎಂಬುದು ಎಲ್ಲರಿಗೂ ತಿಳಿಯುತ್ತದೆ.

# ಅಂತರ ಲಿಂಗೀಯ ಜನರ ಹಕ್ಕುಗಳ ಕುರಿತು ಅಮೆರಿಕ ದೇಶದ ನ್ಯಾಯಾಲಯ ನೀಡಿರುವ ತೀರ್ಪುಗಳು

ಅಂತರ ಲಿಂಗೀಯ ಜನರ ಹಕ್ಕುಗಳ ಕುರಿತು ಅಮೆರಿಕ ದೇಶದ ನ್ಯಾಯಾಲಯ ನೀಡಿರುವ ತೀರ್ಪುಗಳು

ಯು.ಎಸ್. ಸುಪ್ರೀಂ ಕೋರ್ಟು

ಪ್ರೈಸ್ ವಾಟರ್ ಹೌಸ್ 5 ಹಾಪ್‌ಕಿನ್ಸ್, 490 US. 228 (1989)

(ಸಾಂಪ್ರದಾಯಿಕ ಲಿಂಗ ರೂಢಿಗತಗಳನ್ನು ಒಪ್ಪಿಕೊಳ್ಳದಿದ್ದ ಕಾರಣಕ್ಕೆ ವ್ಯಕ್ತಿಯೊಬ್ಬರಿಗೆ ನೀಡಿದ ಕಿರುಕುಳವನ್ನು ಟೈಟಲ್ 7 ಒಳಗೊಂಡಿದೆ)

ನಾಗರೀಕ ಹಕ್ಕುಗಳ ಕಛೇರಿ, ಪರಿಷ್ಕೃತ ಲೈಮಗಿಕ ಕಿರುಕುಳ ಮಾರ್ಗದರ್ಶನ SIII

(ಜನವರಿ 2001)

(ಲಿಂಗಾಧಾರಿತ ಕಿರುಕುಳವು ಲಿಂಗ ಅಥವಾ ಲಿಂಗ ರೂಢಿಗತವನ್ನಾಧರಿಸಿದ ಮೌಖಿಕ, ಅಮೌಖಿಕ ಅಥವಾ ದೈಹಿಕ ಆಕ್ರಮಣ, ಬೆದರಿಕೆ ಅಥವಾ ಹಗೆತನವನ್ನು ಒಳಗೊಂಡಿದೆ. ಆದರೆ ಲೈಂಗಿಕ ಸ್ವಭಾವದ ನಡವಳಿಕೆಯನ್ನು ಒಳಗೊಂಡಿಲ್ಲ. ಇದೂ ಸಹ ಲೈಂಗಿಕ ಕಿರುಕುಳದ ವಿಧಾನವಾಗಿದ್ದು ಅದಕ್ಕೆ ಶಾಲೆಯು ಸ್ಪಂದಿಸತಕ್ಕದ್ದು....") (1989) ಲಿಂಗ ರೂಢಿಗತಗೊಳಿಸುವುದನ್ನು, ಲೈಂಗಿಕ ಕಿರುಕುಳದ ವಿಧಾನವೆಂದು ಪರಿಗಣಿಸುವುದನ್ನು ಟೈಟಲ್ VII ನಿಷೇಧಿಸುತ್ತದೆ) (ಒತ್ತು ನೀಡಿದ್ದನ್ನು ಸೇರಿಸಲಾಗಿದೆ)

ಸರ್ಕ್ಯೂಟ್ ಕೋರ್ಟುಗಳು

ರೋಸ V ಫಾಕ್ ವೆಸ್ಟ್ ಬ್ಯಾಂಕ್ ಮತ್ತು ಟರಸ್ಟ್ ಕಂ., 214 F. 3d 213

(1ನೇ ಸರ್ಕ್ಯೂಟ್ 2000)

(ಜೈವಿಕವಾಗಿ ಪುರುಷನಾದ ಪಿರ್ಯದ ಪರವಾಗಿ ಸಮಾನ ಸಾಲದ ಅವಕಾಶ ಕಾಯ್ದೆಯ ಪುನರ್ ಸ್ಥಾಪನೆ. ಗಂಡಸಿನಂತೆ ಪೋಷಾಕು ಧರಿಸಿಲ್ಲದಿದ್ದ ಕಾರಣಕ್ಕೆ, ಸಾಲ ಪಡೆಯಲು ಅರ್ಜಿ ಸಲ್ಲಿಸುವ ಅವಕಾಶವನ್ನು ನಿರಾಕರಿಸಲಾಗಿತ್ತು ಎಂದು ಆ ವ್ಯಕ್ತಿಯು ಆರೋಪಿಸಿದ್ದ)

ಹಿಗ್ಗಿನ್ಸ್ V ನ್ಯೂ ಬ್ಯಾಲೆನ್ಸ್ ಅಥ್ಲೆಟಿಕ್ ಶೂ, ಇಂಕ್. 194 F. 3d 252, 261

ಎನ್.4 (1ನೇ ಸರ್ಕ್ಯೂಟ್ 1999)

("ಮಹಿಳೆಯೊಬ್ಬಳು, ತಾನು ಹೆಣ್ತನದ ರೂಢಿಗತ ನಿರೀಕ್ಷೆಗಳನ್ನು ಪೂರೈಸದಿದ್ದ ಕಾರಣಕ್ಕೆ ಪುರುಷರಿಂದ ತಾರತಮ್ಯಕ್ಕೊಳಗಾದ ಆಧಾರದ ಮೇಲೆ ಕ್ರಮ ಕೈಗೊಳ್ಳುವಂತೆಯೆ ಪುರುಷನೊಬ್ಬ ತಾನು ಪುರುಷತನದ ರೂಢಿಗತ ನಿರೀಕ್ಷೆಗಳನ್ನು ಪೂರೈಸದಿದ್ದ ಕಾರಣಕ್ಕೆ ಇತರೆ ಗಂಡಸರಿಂದ ತಾರತಮ್ಯಕ್ಕೊಳಗಾದ ಸಾಕ್ಷ್ಯದ ಮೇಲೆ ಹಕ್ಕು ಸ್ಥಾಪನೆ ಮಾಡಬಹುದು")

(ಪ್ರೈಸ್ ವಾಟರ್ ಹೌಸ್ V ಹಾಪ್‌ಕಿನ್ಸ್, US. 228, 250-51 (1989) ಕೇಸನ್ನು ಉಲ್ಲೇಖಿಸಿ)

ಸಿಮೋನ್‌ಟನ್ V ರನ್ಯಾನ್, 232 F 3d 33 (2ನೇ 2000)

(ಲಿಂಗ ನಿಯಮಗಳಿಗೆ ಸಮ್ಮತಿಸಲು ವಿಫಲರಾದ ಆಧಾರದ ಮೇಲೆ ತಾರಮ್ಯಕ್ಕೊಳಗಾಗುವುದು. ಟೈಟಲ್ VIIರಡಿ ಸಂಜ್ಞೇಯವಾಗಬಹುದಾದನ್ನು ಗಮನಿಸಿ)

ಬಿಬ್ಬಿ V ಫಿಲ, ಕೋಕಾ ಕೋಲ ಬಾಟ್ಲಿಂಗ್ ಕಂ. 260 F 3d

(3ನೇ ಸ. 2001)

"ಕಿರುಕುಳ ನೀಡಿದ ವ್ಯಕ್ತಿಯ ನಡವಳಿಕೆಯು" ಕಿರುಕುಳಕ್ಕೆ ಒಳಗಾದ ವ್ಯಕ್ತಿಯು ಅವನ ಅಥವಾ ಅವಳ ಲಿಂಗದ ರೂಢಿಗತಗಳಿಗೆ ಪೂರಕವಾಗಿವೆಂಬ ನಂಬಿಕೆಯಿಂದ ಪ್ರೇರಿತವಗಿದೆ ಎಂಬುದನ್ನು ತೋರಿಸುವ ಮೂಲಕ ಪಿರ್ಯಾದಿಯು ಲಿಂಗ ತಾರತಮ್ಯ ಸಾಬೀತು ಪಡಿಸಬಹುದೆಂಬುದನ್ನು ಎತ್ತಿ ಹಿಡಿದು"

ಸ್ಪೇರ್‌ಮನ್ V ಫೋರ್ಡ್ ಮೋಟಾರ್ ಕಂ., 231, F 3d 1080

(7ನೇ ಸ. 2000)

(ಲಿಂಗ ರೂಢಿಗತವು ಲೈಂಗಿಕ ಕಿರುಕುಳಕ್ಕೆ ಸಾಕ್ಷಿಯಾಗಬಹುದೆಂಬುದನ್ನು ಉಲ್ಲೇಖಿಸಿ)

ಡೊ V ಬೆಲ್ಲೆವಿಲ್ಲೆ, 119 E.3d 563 (7ನೇ ಸ. 1997) ತೆರವು ಮಾಡಿ ಬೇರೆ ಆಧಾರಗಳ ಮೇಲೆ ಪುನರ್ ವಿಚಾರಣೆಗೆ ಕಳಸಲಾಯಿತು, 523 ಯು.ಎಸ್. 1001 (1998)

("ಟೈಟಲ್ VII, ಆತನ ಅಥವಾ ಆಕೆಯ ಬಾಹ್ಯರೂಪ ಅಥವಾ ನಡವಳಿಕೆಯು ರೂಢಿಗತ ಲಿಂಗಾಧಾರಿತ ಪಾತ್ರಗಳನ್ನು ದೃಢ ಪಡಿಸುವುದಿಲ್ಲವೆಂಬ ಕಾರಣಕ್ಕೆ ನೌಕರರನ್ನು ಪ್ರತಿಕೂಲವಾಗಿ ನಡೆಸಿಕೊಳ್ಳಲು ಅನುಮತಿ ನೀಡುವುದಿಲ್ಲ" ಮತ್ತು "ಆತನ ದನಿ ಮೃದುವಾಗಿದೆ, ಮೈಕಟ್ಟು ತೆಳ್ಳಗಿದೆ, ಕೂದಲು ಉದ್ದವಿದೆ ಎಂಬ ಕಾರಣಕ್ಕೆ ಪುರುಷನೊಬ್ಬನಿಗೆ ಕಿರುಕುಳವಾದರೆ ಅಥವಾ ಪುರುಷನೊಬ್ಬ ಹೇಗೆ ಕಾಣಿಸಬೇಕು ಮತ್ತು ವರ್ತಿಸಬೇಕು ಎಂಬ ಆತನ ಸಹೋದ್ಯೋಗಿಗಳ ಕಲ್ಪನೆಗೆ ತಕ್ಕದಲ್ಲದ ರೀತಿಯಲ್ಲಿ ಆತ ತನ್ನ ಪುರುಷತ್ವವನ್ನು ಪ್ರದರ್ಶಿಸುತ್ತಾನೆಂಬ ಕಾರಣಕ್ಕೆ ಕಿರುಕುಳವಾದರೆ ಅದಕ್ಕೆ ಕಾರಣ ಆತನ ಲಿಂಗ" ಎಂದು ವಿವರಣೆ ನೀಡಿದೆ).

ಸ್ಕಿಮೆಡ್ಡಿಂಗ್ V ನೆಮೆಕ್ ಕಂ., ಇಂಕ್., 187 F 3d 862 (8ನೇ ಸ. 1999) (ಪಿರ್ಯಾದಿಯು ಟೈಟಲ್ VIIನ್ನು ಉಲ್ಲೇಖಿಸಿ, 'ಕಿರುಕುಳವು, ತನ್ನ ಪುರುಷತ್ವವನ್ನು ಅವಹೇಳನ ಮಾಡುವ ಪ್ರಯತ್ನವಾಗಿ ಆತನನ್ನು ಸಲಿಂಗಕಾಮಿ ಎಂಬ ಹಣೆಪಟ್ಟಿ ಹಚ್ಚು ಸುಳ್ಳು ವದಂತಿಗಳನ್ನು ಒಳಗೊಂಡಿದೆ ಎಂದು ಸಾಧನೆ ಮಾಡಿರುವುದನ್ನು ಎತ್ತಿ ಹಿಡಿದು)

ನಿಕೊಲಸ್ V ಅಸ್‌ಟೆಕ್ ರೆಸ್ಟೋರಾಂಟ್ ಎಂಟರ್‌ಪ್ರೈಸಸ್, 256 F 3d 864, 874-75 (9ne s. 2001)

"ಹೆಣ್ಣಿಗೆ (ಪಿರ್ಯಾದಿ) ಎಂಬ ಗ್ರಹಿಕೆಯನ್ನು ಆಧರಿಸಿದ ಕಿರುಕುಳವು ಲಿಂಗವನ್ನಾಧರಿಸಿದ ಕಿರುಕುಳವಾಗಿದ್ದು ಟೈಟಲ್ VII ರ ಮತ್ತು ತಾರತಮ್ಯದ ವಿರುದ್ಧ ವಾಷಿಂಗ್ಟನ್ ಕಾಯ್ದೆಯ ಉಲ್ಲಂಘನೆಯಾಗಿದೆ ಮತ್ತು ಡಿಸ್ಯಾಂಟಿಸ್ V ಪೆಸಿಫಿಕ್ ಟೆಲಿ ಅಂಡ್ ಕಂ., ಇಂಕ್ 608 F2d 327 (9ನೇ ಸ. 1979)ನ್ನು ತಳ್ಳಿ ಹಾಕಿದೆ ಎಂಬುದನ್ನು ಎತ್ತಿ ಹಿಡಿದು

ಶ್ವೆಂಕ್ V ಹಾರ್ಟ್‌ಫೋರ್ಡ್‌, 204 F3d 1187, 1202 (9ನೇ ಸ. 2000)

(" ಪುರುಷ ಅಥವಾ ಮಹಿಳೆಯಿಂದ ನಿರೀಕ್ಷಿಸಲಾದ ರೀತಿಯಲ್ಲಿ ವರ್ತಿಸಲು ವಿಫಲರಾದ ಕಾರಣಕ್ಕೆ ತಾರತಮ್ಯ" ವಾಗುವುದನ್ನು ಟೈಟಲ್ VII ನಿಷೇಧಿಸುತ್ತದೆ ಎಂಬುದನ್ನು ಟಿಪ್ಪಣಿ ಮಾಡಿ)

ಜಿಲ್ಲಾ ನ್ಯಾಯಾಲಯಗಲು

ಸೆಂಟೊಲಲ V ವಾಟರ್, 2002 WL12296 - 2(D.maa.2002)

(ಟೈಟಲ್ VII, "ವ್ಯಕ್ತಿಯೊಬ್ಬ 'ನಿಜ'ವಾದ ಗಂಡಸು ಹೇಗೆ ಕಾಣಬೇಕು ಅಥವಾ ವರ್ತಿಸಬೇಕು ಎಂಬ ಅವರ ವಿಚಾರವನ್ನು ದೃಢೀಕರಿಸುವುದಿಲ್ಲ ಎಂಬ ಗ್ರಹಿಕೆಯನ್ನು ಆಧರಿಸಿದ ಕಿರುಕುಳವನ್ನು ನಿಷೇಧಿಸುವುದನ್ನು" ಎತ್ತಿ ಹಿಡಿದು)

ಐನೆಟ್ V ಪುಟ್ನ ಇನ್‌ವೆಸ್ಟ್‌ಮೆಂಟ್ಸ್ ಇಂಕ್., 142 F. Supp 2d 131 (D.mass.2001)

("ಪುರುಷಲಿಂಗ ರೂಢಿಗತವನ್ನು ನೆರವೇರಿಸಲು ವಿಫಲರಾಗುವುದನ್ನು" ಆಧರಿಸಿದ ಕಿರುಕುಳವನ್ನು ಟೈಟಲ್ VII ನಿಷೇಧಿಸುತ್ತದೆ ಎಂಬುದನ್ನು ಎತ್ತಿಹಿಡಿದು)

ಸ್ನೆಲ್ಲಿಂಗ್ V ಫಾಲ್ ಮೌಂಟನ್ ರೀಜನಲ್ ಸ್ಕೂಲ್ Dist, 2001 WL 276975 (D.N.H. 2001)

("ಪುರುಷತ್ವದ ಲಿಂಗಾಧಾರಿತ ರೂಢಿಗತಗಳನ್ನು" ಆಧರಿಸಿದ ಕಿರುಕುಳವು ಟೈಟಲ್ IX ರ ಅತಿ ಕ್ರಮ ಜರುಗಿಸಬಹುದಾಗಿದೆ ಎಂಬುದನ್ನು ಎತ್ತಿ ಹಿಡಿದು)

ಬಿಲುನಸ್ V ಹೆಂಡರ್‌ಸನ್, 2000 WL 639329 (D.N.H.2000) ("ವ್ಯಕ್ತಿಯೊಬ್ಬರು ರೂಢಿಗತಗಳಿಗನುಗುಣವಾದ ಪುರುಷ ಕಲ್ಪನೆಗೆ ಪೂರಕವಾದ ರೀತಿಯಲ್ಲಿ ಕಾಣಿಸಿಕೊಳ್ಳವುದಿಲ್ಲ ಅಥವಾ ಪೋಷಾಕುಧರಿಸುವುದಿಲ್ಲ" ಎಂಬುದನ್ನು ಆಧರಿಸಿದ ತಾರತಮ್ಯವು ಲಿಂಗವನ್ನಾಧರಿಸಿದ ಕಾನೂನು ಬಾಹಿರ ತಾರತಮ್ಯವೆಂಬುದನ್ನು ಉಲ್ಲೇಖಿಸಿ)

ಸ್ಲಾಂಬೋರ್‌ಸ್ಕಿ V ವೆಸ್ಟ್ ವ್ಯಾಲಿ ನ್ಯೂಕ್ಲಿಯರ್ ಸರ್ವಿಸಸ್, ಕಂ., 1999 V.S. Dist Lexis 20263 (W.D.N.Y.1999)

(ಲಿಂಗ ರೂಢಿ ಗತಗೊಳಿಸುವುದರ ಸಾಕ್ಷ್ಯವು ಉದ್ಯೋಗ ನಿರ್ಧಾರ ಅಥವಾ ದುರುಪಯೋಗದ ವಾತಾವರಣ ಲಿಂಗವನ್ನಾಧರಿಸಿದೆ ಎಂಬುದಕ್ಕೆ ಪುರಾವೆ ಒದಗಿಸಬಹುದೆಂಬುದನ್ನು ಎತ್ತಿಹಿಡಿದು)

# ಲಿಂಗ ಹಕ್ಕುಗಳ ಅಂತರರಾಷ್ಟ್ರೀಯ ಮಸೂದೆ

(ಜೂನ್ 17, 1995ರಲ್ಲಿ ಹೌಸ್ಟನ್, ಟೆಕ್ಸಾಸ್, ಯ.ಎಸ್.ಎ. ನಲ್ಲಿ ಅಂಗೀಕರಿಸಿದಂತೆ )

ಲಿಂಗ ಹಕ್ಕುಗಳ ಅಂತರರಾಷ್ಟ್ರೀಯ ಮಸೂದೆ (International Bill of Gender Rights - IBGR) ಯೂ ಮಾನವ ಮತ್ತು ನಾಗರೀಕ ಹಕ್ಕುಗಳನ್ನು ಲಿಂಗಾಧಾರಿತ ದೃಷ್ಟಿಕೋನದಲ್ಲಿ ವ್ಯಕ್ತಪಡಿಸಲು ಪ್ರಯತ್ನಿಸುತ್ತದೆ. ಕೆಳಗೆ ಪ್ರತಿಪಾದಿಸಿರುವ ಹತ್ತು ಹಕ್ಕುಗಳನ್ನು ನಿದಿಷ್ಟ ಆಸಕ್ತ ಗುಂಪಿಗೆ ಅನ್ವಯಿಸುವ ವಿಶೇಷ ಹಕ್ಕುಗಳೆಂದು ನೋಡಬಾರದು. ಹಾಗೆಯೇ ಈ ಹಕ್ಕುಗಳ ಪ್ರಯೋಗವೂ ಲಿಂಗ ಅಸ್ಮಿತೆ ಮತ್ತು ಲಿಂಗ ಪಾತ್ರದ ವಿಷಯಗಳು ಪ್ರಮುಖ ಕಾಳಜಿಯಾಗಿರುವ ವ್ಯಕ್ತಿಗಳಿಗಷ್ಟೇ ಸೀಮಿತವಾಗಿಲ್ಲ. IGBR ನ ಎಲ್ಲ ಹತ್ತು ವಿಭಾಗಗಳು ಸಾರ್ವತ್ರಿಕ ಹಕ್ಕುಗಳಾಗಿದ್ದು, ಪ್ರತಿಯೊಬ್ಬ ಮನುಷ್ಯ ಜೀವಿಯು ಪಡೆದುಕೊಳ್ಳಬಹುದಾಗಿದೆ ಮತ್ತು ಚಲಾಯಿಸಬಹುದಾಗಿದೆ. ಮಸೂದೆಯ ಕರಡನ್ನು ಮೊದಲಿಗೆ ಸಮಿತಿಯಲ್ಲಿ ರಚಿಸಲಾಯಿತು. ಅದನ್ನು ಇಂಟರ್‌ನ್ಯಾಷನಲ್ ಕಾನ್ಫರೆನ್ಸ್ ಅನ್ ಟ್ರಾನ್ಸ್‌ಜೆಂಡರ್ ಲಾ ಅಂಡ್ ಎಂಪ್ಲಾಯ್‌ಮೆಂಟ್ ಪಾಲಿಸಿ (ICTLEP)ಯು ತನ್ನ ಎರಡನೇ ವಾರ್ಷಿಕ ಸಭೆಯಲ್ಲಿ ಅಂಗೀಕರಿಸಿತು. ಈ ಸಭೆಯನ್ನು ಟೆಕ್ಸಾಸ್‌ನ ಹೌಸ್ಟನ್‌ನಲ್ಲಿ ಆಗಸ್ಟ್ 26-29, 1993ರಲ್ಲಿ ಆಯೋಜಿಸಲಾಗಿತ್ತು.

IBGR ಅನ್ನು ಸಮಿತಿಯಲ್ಲಿ ಪುನರಾವಲೋಕಿಸಿ ತಿದ್ದುಪಡಿ ತರಲಾಯಿತು. ಪರಿಷ್ಕರಿಸಿದ ಮಸೂದೆಯನ್ನು ICTLEPಯ ಮುಂದಿನ ಸಬೆಗಳಲ್ಲಿ ಅಂದರೆ 1994 ಮತ್ತು 1995ರಲ್ಲಿ ಅಂಗೀಕರಿಸಲಾಯಿತು.

IBGR ಒಂದು ತಾತ್ವಿಕ ರಚನೆಯಾಗಿದ್ದು ಅದಕ್ಕೆ ಕಾನೂನಿನ ಬಲವಿಲ್ಲ. ಇದನ್ನು ವಿಧಾಯಕ ಮಂಡಳಗಳು ಅಂಗೀಕರಿಸಿಲ್ಲ. ಇದರ ತತ್ವಗಳನ್ನು ನ್ಯಾಯಾಲಯಗಳು, ಆಡಳಿತ ಏಜೆನ್ಸಿಗಳು, ವಿಶ್ವಸಂಸ್ಥೆಯಂತಹ ಅಂತರರಾಷ್ಟ್ರೀಯ ಸಂಸ್ಥೆಗಳು ಅಂಗೀಕರಿಸಿಲ್ಲ.

ಹಾಗಾದರೂ IBGR ವ್ಯಕ್ತಪಡಿಸುವ ಸತ್ಯಗಳು ಮತ್ತು ತತ್ವಗಳನ್ನು ವ್ಯಕ್ತಿಗಳು ಮುಕ್ತರಾಗಿ ಅಂಗೀಕರಿಸಬಹುದು, ಆ ಪ್ರಕಾರ ಬದುಕಬಹುದು. ಈ ರೀತಿಯಲ್ಲಿ IBGR ನಲ್ಲಿ ವ್ಯಕ್ತಪಡಿಸಲಾದ ಸತ್ಯಗಳನ್ನು ಶಾಸಕರು, ನ್ಯಾಯಾಧೀಶರು, ಅಧಿಕಾರಿಗಳು ಹಾಗೂ ರಾಜತಾಂತ್ರಿಕರಿಗಿಂತಲೂ ಮಿಗಿಲಾಗಿ ಮಾನವ ಜನಾಂಗವನ್ನು ಬಿಡುಗಡೆಗೊಳಿಸುತ್ತವೆ, ಸಶಕ್ತಗೊಳಿಸುತ್ತವೆ.

IBGR ವ್ಯಕ್ತಪಡಿದ ಸತ್ಯಗಳನ್ನು ಮಾನವ ಜನಾಂಗ ಅಪ್ಪಿಕೊಂಡು ಅಭಿವ್ಯಕ್ತಪಡಿಸಿದರೆ ಶಾಸಕರ ಕ್ರಿಯೆಗಳು, ನ್ಯಾಯಾಲಯದ ಅಭಿಪ್ರಾಯಗಳು, ಆಡಳಿತದ ರಚನೆಗಳು ಅವಶ್ಯಕವಾಫಿ ಅನುಸರಿಸುತ್ತವೆ. ಹೀಗೆ, ಲಕ್ಷಾಂತರ ಮಾನವ ಜೀವಿಗಳು ತುಳಿದ ಮುಕ್ತ ಅಭಿವ್ಯಕ್ತಿಯ

ಹಾದಿಯ ಉದ್ದೇಶ ತಮ್ಮನ್ನು ತಾವು ಸ್ಪಷ್ಟಪಡಿಸುವುದಾಗಿದೆ. ತಮ್ಮ ಬದುಕುಗಳಿಗೆ ಅರ್ಥ ನೀಡುವುದಾಗಿದೆ. ಇದು ಅಂತಿಮವಾಗಿ ಆಡಳಿತ ಅಂಗಗಳ ಕ್ರಮಗಳನ್ನು ನಿರ್ಣಯಿಸುತ್ತವೆ.

IBGR ಒಂದು ಪರಿವರ್ತನೀಯ ಮತ್ತು ಕ್ರಾಂತಿಕಾರಕ ದಾಖಲೆಯಾಗಿದೆ. ಇದು ವೈಯಕ್ತಿಕ ಸ್ವಾತಂತ್ರ್ಯ ಮತ್ತು ಅಭಿವ್ಯಕ್ತಿ ಸವಾತಂತ್ರ್ಯದ ಗಟ್ಟಿನೆಲದಲ್ಲಿ ಬೇರು ಬಿಟ್ಟಿದೆ. ನಮ್ಮ ಬದುಕುಗಳು ತೆರೆದಿಟ್ಟಿರುವ ಈ ಸತ್ಯದ ತಿರುಳನ್ನು ಬಯಸುವ, ಚಲಾಯಿಸುವ ಎಲ್ಲರಿಗಾಗಿಯೂ ಇಲ್ಲಿ ಇಟ್ಟಿದ್ದೇವೆ.

ಈ ದಾಖಲೆಗೆ ಕಾಪಿರೈಟ್ ಇದ್ದರೂ ಸಹ, ಇದರಲ್ಲಿ ಅಡಕವಾಗಿರುವ ತತ್ವಗಳು ಮತ್ತು ಹೇಳಿಕೆಗಳನ್ನು ಬೆಂಬಲಿಸುವ ಯಾರಾದರೂ ಯಾವ ರೀತಿಯಲ್ಲಾದರೂ ಮರು ಪ್ರಕಟಿಸಬಹುದು, ಉಚಿತವಾಗಿ ಹಂಚಬಹುದು.

IBGR ಕುರಿತ ಟೀಕೆಗಳು, ಸಲಹೆಗಳು ಅಥವಾ ಪ್ರಶ್ನೆಗಳನ್ನು ಇಲ್ಲಿಗೆ ಕಳುಹಿಸಿ Sharon, STUART, IBGR PROJECT, BOX 930, CO-OPERTSTOWN, NY 13326 USA. Telephone : (607)5474118. Fax : (607) 547-2196.E-mail : stucomone@ad.com

## ಲಿಂಗ ಅಸ್ಮಿತೆಯನ್ನು ನಿರ್ಧರಿಸುವ ಹಕ್ಕು

ಎಲ್ಲ ಮಾನವ ಜೀವಿಗಳು ತಮ್ಮೊಳಗೆ, ತಾವು ಯಾರು ಮತ್ತು ಏನನ್ನು ಸಾಧಿಸಲು ಸಮರ್ಥರು ಎಂದು ಸಾಬೀತು ಪಡಿಸಬೇಕು ಎಂಬ ವಿಚಾರವನ್ನು ಯಾವಾಗಲೂ ಹೊಂದಿರುತ್ತಾರೆ. ವ್ಯಕ್ತಿಯ 'ಸ್ವಯಂ' ಎಂಬ ಪ್ರಜ್ಞೆಯನ್ನು ವರ್ಣತಂತುಗಳು, ಜನನೇಂದ್ರಿಯಗಳು, ಜನನ ಸಂದರ್ಭ ನಿರ್ಧರಿಸುವ ಲಿಂಗ ಅಥವಾ ಪ್ರಾರಂಭದ ಲಿಂಗಾಧಾರಿದ ಪಾತ್ರಗಳು ನಿರ್ಧರಿಸುವುದಿಲ್ಲ. ಹಾಗಾಗಿ ವ್ಯಕ್ತಿಯ ಅಸ್ಮಿತೆಯನ್ನು ಮತ್ತು ಸಾಮರ್ಥ್ಯವನ್ನು, ಸಮಾಜವು ಪರಿಗಣಿಸುವ ಪುರುಷತ್ವ ಅಥವಾ ಸ್ತ್ರೀತ್ವದ ವರ್ತನೆಗಳು ಕಟ್ಟಿ ಹಾಕಲು ಸಾಧ್ಯವಿಲ್ಲ. ವ್ಯಕ್ತಿಗಳಿಗೆ ತಮ್ಮ ಬದುಕು ಬಿಚ್ಚಿಕೊಳ್ಳುತ್ತಾ ಹೋದಂತೆ, ವರ್ಣ ತಂತುಗಳು, ಜನನೇಂದ್ರಿಯಗಳು ನಿರ್ಧರಿಸುವ ಲಿಂಗ, ಜನನ ಸಂದರ್ಭ ನಿರ್ಧರಿಸುವ ಲಿಂಗ ಅಥವಾ ಪ್ರಾರಂಭದ ಲಿಂಗಾಧಾರಿತ ಪಾತ್ರಗಳನ್ನು ಪರಿಗಣಿಸದೆ ತಮ್ಮದೇ ಲಿಂಗ ಅಸ್ಮಿತೆಗಳನ್ನು ನಿರ್ಧರಿಸುವ ಹಕ್ಕು ಇದೆ.

ಆದ್ದರಿಂದ ವರ್ಣತಂತುಗಳು, ಜನನೇಂದ್ರಿಯಗಳು, ಜನನ ಸಂದರ್ಭವು ನಿರ್ಧರಿಸುವ ಲಿಂಗ ಅಥವಾ ಪ್ರಾರಂಭದ ಲಿಂಗಾಧಾರಿತ ಪಾತ್ರವಲ್ಲದೆ ಸ್ವ-ನಿರ್ಧಾರಿತ ಲಿಂಗ ಅಸ್ಮಿತೆ ಹೊಂದಿರುವರೆಂಬ ಕಾರಣಕ್ಕೆ ಯಾವ ವ್ಯಕ್ತಿಗೂ ಮಾನವ ಅಥವಾ ನಾಗರೀಕ ಹಕ್ಕುಗಳನ್ನು ನಿರಾಕರಿಸುವಂತಿಲ್ಲ.

## ಲಿಂಗ ಅಸ್ಮಿತೆಯನ್ನು ಮುಕ್ತವಾಗಿ ವ್ಯಕ್ತಪಡಿಸುವ ಹಕ್ಕು

ತಮ್ಮ ಲಿಂಗ ಅಸ್ಮಿತೆಯನ್ನು ತಾವೇ ನಿರ್ಧರಿಸುವ ಹಕ್ಕನ್ನು ಪಡೆದುಕೊಂಡಂತೆ ತಾವು ನಿರ್ಧರಿಸಿದ ಲಿಂಗ ಅಸ್ಮಿತೆಯನ್ನು ಮುಕ್ತವಾಗಿ ವ್ಯಕ್ತಪಡಿಸುವ ಪೂರಕವಾದ ಹಕ್ಕು ಎಲ್ಲ ಮಾನವ ಜೀವಿಗಳಿಗಿದೆ.

ಆದ್ದರಿಂದ, ಸ್ವಯಂ ನಿರ್ಧಾರಿತ ಲಿಂಗ ಅಸ್ಮಿತೆಯನ್ನು ಮುಕ್ತವಾಗಿ ಅಭಿವ್ಯಕ್ತಿಸುವ ಕಾರಣಕ್ಕೆ ಯಾವ ವ್ಯಕ್ತಿಗೂ ಮಾನವ ಅಥವಾ ನಾಗರೀಕ ಹಕ್ಕುಗಳನ್ನು ನಿರಾಕರಿಸುವಂತಿಲ್ಲ.

## ಉದ್ಯೋಗ ಪಡೆದುಕೊಳ್ಳುವ ಮತ್ತು ಉಳಿಸಿಕೊಳ್ಳುವ ಮತ್ತು ನ್ಯಾಯಯುತ ಪರಿಹಾರ ಪಡೆದುಕೊಳ್ಳುವ ಹಕ್ಕು

ಆಧುನಿಕ ಸಮಾಜದ ಆರ್ಥಿಕ ರಚನೆಯಲ್ಲಿ ಎಲ್ಲ ಮಾನವ ಜೀವಿಗಳಿಗೂ ಕಸುಬು ಅಥವಾ ವೃತ್ತಿಗಾಗಿ ತರಬೇತಿ ಪಡೆಯುವ, ನಡೆಸುವ ಹಕ್ಕಿದೆ. ಈ ಕಸುಬು ಅಥವಾ ವೃತ್ತಿಯು ಆಶ್ರಯ, ಅನ್ನಧಾರ ಮತ್ತು ಬದುಕಿನ ಅಗತ್ಯಗಳು ಹಾಗೂ ಔದಾರ್ಯವನ್ನು ತಮಗೆ ಹಾಗೂ ತಮ್ಮನ್ನು ನಂಬಿಕೊಂಡಿರುವವರಿಗಾಗಿ ಪಡೆಯುವ ಸಾಧನವಾಗಿದೆ. ಯವುದೇ ಲಿಂಗ ಅಸ್ಮಿತೆ, ವರ್ಣತಂತುಗಳು, ಜನನೇಂದ್ರಿಯಗಳು' ಜನನ ಸಂದರ್ಭನಿರ್ಧರಿಸುವ ಲಿಂಗ ಅಥವಾ ಪ್ರಾರಂಭದ ಲಿಂಗಾಧಾರಿತ ಪಾತ್ರಗಳನ್ನು ಪರಿಗಣಿಸದೆ. ಯಾವುದೆ ವ್ಯಕ್ತಿಗಾಗಲಿ ಉದ್ಯೋಗ ಪಡೆಯುವ, ಉಳಿಸಿಕೊಳ್ಳುವ ಮತ್ತು ಅವರ ದುಡಿಮೆಗೆ ನ್ಯಾಯಯುತವಾದ ಪರಿಹಾರ ಪಡೆಯುವ ಹಕ್ಕಿರಬೇಕು.

ಆದ್ದರಿಂದ ಯಾವುದೇ ವ್ಯಕ್ತಿಗೆ ವರ್ಣತಂತುಗಳು, ಜನನೇಂದರಿಯಗಳು, ಜನನ ಸಂದರ್ಭ ನಿರ್ಧರಿಸುವ ಲಿಂಗ ಅಥವಾ ಪ್ರಾರಂಭದ ಲಿಂಗಾಧಾರಿತ ಪಾತ್ರಗಳಿಗನುಗುಣವಾಗಿ ಸ್ವಯಂ-ನಿರ್ಧಾರಿತ ಲಿಂಗ ಅಸ್ಮಿತೆ ಅಥವಾ ಅಭಿವ್ಯಕ್ತಿಯನ್ನಾಧರಿಸಿ ಪಾತ್ರ ಕಸುಬು ಅಥವಾ ವೃತ್ತಿಗಾಗಿ ತರಬೇತಿ ಹೊಂದುವುದನ್ನು ಅಥವಾ ಅದನ್ನು ಪಡೆಯುವುದನ್ನೊ ಅಥವಾ ಉದ್ಯೋಗವನ್ನು ಪಡೆದುಕೊಳ್ಳುವುದನ್ನೊ, ಉಳಿಸಿಕೊಳ್ಳುವುದನ್ನೊ ಅವರ ದುಡಿಮೆಗೆ ನ್ಯಾಯಯುತವಾದ ಪರಿಹಾರ ಪಡೆಯುವುದನ್ನೊ ನಿರಾಕರಿಸಬಾರದು.

**ಲಿಂಗೀಯ ಅವಕಾಶವನ್ನು ಪಡೆದುಕೊಳ್ಳುವ ಮತ್ತು ಲಿಂಗೀಯ ಚಟುವಟಿಕೆಗಳಲ್ಲಿ ಭಾಗವಹಿಸುವ ಹಕ್ಕು:**

ತಮ್ಮ ಲಿಂಗ ಅಸ್ಮಿತೆಯನ್ನು ನಿರ್ಧರಿಸುವ ಮತ್ತು ಅದರ ಮುಕ್ತ ಅಭಿವ್ಯಕ್ತಿಯ ಹಕ್ಕನ್ನಾಧರಿಸಿ ಯಾವ ವ್ಯಕ್ತಿಗೂ ಅವಕಾಶ ಪಡೆದುಕೊಳ್ಳುವುದನ್ನು ನಿರಾಕರಿಸಬಾರದು. ಅಥವಾ ಸ್ವಯಂ ನಿರ್ಧಾರಿತ ಲಿಂಗ ಅಸ್ಮಿತೆಯು ವರ್ಣತಂತು, ಜನನೇಂದ್ರಿಯ, ಜನನಸಂದರ್ಭ ನಿರ್ಧರಿಸುವ ಲಿಂಗಕ್ಕೆ ಅಥವಾ ಪ್ರಾರಂಭದ ಲಿಂಗಾಧಾರಿತ ಪಾತ್ರಕ್ಕೆ ಪೂರಕವಾಗಿಲ್ಲವೆಂಬ ಕಾರಣಕ್ಕೆ ಚಟುವಟಿಕೆಯಲ್ಲಿ ಭಾಗವಹಿಸುವುದನ್ನು ನಿರಾಕರಿಸುವಂತಿಲ್ಲ.

ಆದ್ದರಿಂದ ಸ್ವಯಂ ನಿರ್ಧಾರಿತ ಲಿಂಗ ಅಸ್ಮಿತೆ, ವರ್ಣತಂತು, ಜನನೇಂದ್ರಿಯ, ಜನನ ಸಂದರ್ಭ ನಿರ್ಧರಿಸುವ ಲಿಂಗಕ್ಕೆ ಅಥವಾ ಪ್ರಾರಂಭದ ಲಿಂಗಾಧಾರಿತ ಪಾತ್ರಕ್ಕೆ ಪೂರಕವಾಗಿಲ್ಲ ಎಂಬ ಕಾರಣಕ್ಕೆ ಯಾವುದೇ ವ್ಯಕ್ತಿಗೆ ಅವಕಾಶ ಪಡೆದುಕೊಳ್ಳುವುದನ್ನು ಅಥವಾ ಯಾವುದೇ ಚಟುವಟಿಕೆಯಲ್ಲಿ ಭಾಗವಹಿಸುವುದನ್ನು ನಿರಾಕರಿಸುವಂತಿಲ್ಲ.

**ತಮ್ಮದೇ ದೇಹವನ್ನು ನಿಯಂತ್ರಿಸುವ ಮತ್ತು ಬದಲಾಯಿಸುವ ಹಕ್ಕು**

ಎಲ್ಲಾ ಮಾನವ ಜೀವಿಗಳಿಗೂ ತಮ್ಮ ದೇಹವನ್ನು ನಿಯಂತ್ರಿಸುವ ಹಕ್ಕಿದೆ. ಈ ಹಕ್ಕು ಅವರ ದೇಹವನ್ನು ಸೌಂದರ್ಯವೃದ್ಧಿಗಾಗಿ ರಾಸಾಯನಿಕವಾಗಿ ಅಥವಾ ಶಸ್ತ್ರಚಿಕಿತ್ಸೆಯ ಮೂಲಕ ಸ್ವನಿರ್ಧಾರಿತ ಲಿಂಗ ಅಸ್ಮಿತೆಯ ಅಭಿವ್ಯಕ್ತಿಗಾಗಿ ಬದಲಾಯಿಸಿಕೊಳ್ಳುವುದನ್ನು ಒಳಗೊಂಡಿದೆ.

ಆದ್ದರಿಂದ ಯಾವ ವ್ಯಕ್ತಿಗೂ ಸ್ವನಿರ್ಧಾರಿತ ಲಿಂಗ ಅಸ್ಮಿತೆಯನ್ನು ಅಭಿವ್ಯಕ್ತಿಸಲು ತಮ್ಮ ದೇಹಗಳನ್ನು ಬದಲಾಯಿಸಿಕೊಳ್ಳುವ ಹಕ್ಕನ್ನು ನಿರಾಕರಿಸುವಂತಿಲ್ಲ; ಸ್ವಯಂನಿರ್ಧಾರಿತ ಲಿಂಗ ಅಸ್ಮಿತೆಯನ್ನು ಅಭಿವ್ಯಕ್ತಿಸಲು ತಮ್ಮ ದೇಹವನ್ನು ಸೌಂದರ್ಯ ವೃದ್ಧಿಗಾಗಿ ರಾಸಾಯನಿಕವಾಗಿ ಅಥವಾ ಶಸ್ತ್ರ ಚಿಕಿತ್ಸೆಯ ಮೂಲಕ. ಬದಲಾಯಿಸಿಕೊಳ್ಳುವ ಅಥವಾ ಬದಲಾಯಿಸಿಕೊಳ್ಳಲು ಬಯಸುತ್ತಾರೆಂಬ ಕಾರಣಕ್ಕೆ ಮಾನವ ಅಥವಾ ನಾಗರೀಕ ಹಕ್ಕುಗಳನ್ನು ನಿರಾಕರಿಸುವಂತಿಲ್ಲ.

**ಮನೋರೋಗ ಪರೀಕ್ಷೆ ಮತ್ತು ಚಿಕಿತ್ಸೆಯಿಂದ ಸ್ವತಂತ್ರರಾಗುವ ಹಕ್ಕು.**

ಲಿಂಗ ಅಸ್ಮಿತೆಯನ್ನು ನಿರ್ಧರಿಸುವ ಹಕ್ಕನ್ನು ನೀಡಿದ ಮೇಲೆ ಲಿಂಗ ಅಸ್ಮಿತೆ ಅಥವಾ ಪಾತ್ರವನ್ನು ಮಾತ್ರ ಆಧರಿಸಿ ವ್ಯಕ್ತಿಗಳನ್ನು ಮನೋರೋಗ ಪರೀಕ್ಷೆ ಅಥವಾ ಚಿಕಿತ್ಸೆಗೆ ಒಳಪಡಿಸಬಾರದು.

ಆದ್ದರಿಂದ ಸ್ವ-ನಿರ್ಧಾರಿತ ಲಿಂಗ ಅಸ್ಮಿತೆ ಅಥವಾ ಅದರ ಅಭಿವ್ಯಕ್ತಿಯನ್ನು ಆಧರಿಸಿ ವ್ಯಕ್ತಿಗಳನ್ನು ರೋಗ, ಅಸ್ವಸ್ಥತೆ ಎಂದು ಮನೊರೋಗ ಪರೀಕ್ಷೆ ಮತ್ತು ಚಿಕಿತ್ಸೆಗೆ ಒಳಪಡಿಸುವಂತಿಲ್ಲ.

**ಲೈಂಗಿಕ ಅಭಿವ್ಯಕ್ತಿಯ ಸ್ವಾತಂತ್ರ್ಯ**

ಸ್ವನಿರ್ಧಾರಿತ ಲಿಂಗ ಅಸ್ಮಿತೆಯ ಹಕ್ಕನ್ನು ಪಡೆದ ಮೇಲೆ ಅದಕ್ಕೆ ತಕ್ಕನಾದ ಮುಕ್ತ ಲೈಂಗಿಕ ಅಭಿವ್ಯಕ್ತಿಯ ಹಕ್ಕು ಸಮ್ಮತಿ ಇರುವ ಪ್ರತಿಯೊಬ್ಬ ವ್ಯಕ್ತಿಗೂ ಇರಬೇಕು.

ಆದ್ದರಿಂದ ಲೈಂಗಿಕಾಭಿಮುಖತೆಯನ್ನಾಧರಿಸಿ ಯಾವ ವ್ಯಕ್ತಿಗೂ ಮಾನವ ಅಥವಾ ನಾಗರೀಕ ಹಕ್ಕುಗಳನ್ನು ನಿರಾಕರಿಸುವಂತಿಲ್ಲ; ಸಮ್ಮತಿ ಇರುವ ಪ್ರೌಢರ ನಡುವಿನ ಲೈಂಗಿಕ ಕ್ರಿಯೆಯ ಮೂಲಕ ಸ್ವನಿರ್ಧಾರಿತ ಲಿಂಗ ಅಸ್ಮಿತೆ ವ್ಯಕ್ತವಾಗುವ ಕಾರಣಕ್ಕೆ ಯಾವ ವ್ಯಕ್ತಿಗೂ ಮಾನವ ಅಥವಾ ನಾಗರೀಕ ಹಕ್ಕುಗಳನ್ನು ನಿರಾಕರಿಸುವಂತಿಲ್ಲ.

**ಬದ್ಧತೆಯ, ಪ್ರೀತಿಯ ಸಂಬಂಧಗಳನ್ನು ಮಾಡಿಕೊಳ್ಳುವ ಮತ್ತು ಮದುವೆ ಒಪ್ಪಂದ ಮಾಡಿಕೊಳ್ಳುವ ಹಕ್ಕು**

ಎಲ್ಲ ಮಾನವ ಜೀವಿಗಳಿಗೂ ಸ್ವನಿರ್ಧಾರಿತ ಲಿಂಗ ಅಸ್ಮಿತೆಯ ಹಕ್ಕು ಮತ್ತು ಲೈಂಗಿಕ ಅಭಿವ್ಯಕ್ತಿಯ ಹಕ್ಕನ್ನು, ಲಿಂಗ ಅಭಿವ್ಯಕ್ತಿಯ ವಿಧಾನವಾಗಿ ನೀಡಿದ ಮೇಲೆ ಅದಕ್ಕೆ ತಕ್ಕನಾದ ಬದ್ಧತೆಯ, ಪ್ರೀತಿಯ ಸಂಬಂಧಗಳನ್ನು ಮತ್ತು ಮದುವೆ ಒಪ್ಪಂದ ಮಾಡಿಕೊಳ್ಳುವ ಹಕ್ಕು ಎಲ್ಲ ವ್ಯಕ್ತಿಗಳಿಗಿದೆ. ಇದಕ್ಕೆ ವರ್ಣತಂತು, ಜನನೇಂದ್ರಿಯ, ಜನನ ಸಂದರ್ಭವನ್ನಾಧರಿಸಿದ ಲಿಂಗ ಅಥವಾ ಪ್ರಾರಂಭದ ಲಿಂಗಾಧಾರಿತ ಪಾತ್ರವೇ ಆಧಾರವಾಗಬೇಕಿಲ್ಲ.

ಆದ್ದರಿಂದ, ತಮ್ಮ ಅಥವಾ ತಮ್ಮ ಸಂಗಾತಿಗಳ ವರ್ಣತಂತು, ಜನನೇಂದ್ರಿಯ, ಜನನ ಸಂದರ್ಭವನ್ನಾಧರಿಸಿದ ಲಿಂಗ ಅಥವಾ ಪ್ರಾರಂಭದ ಲಿಂಗಾಧಾರಿತ ಪಾತ್ರವನ್ನಾಧರಿಸಿ ಅಥವಾ ಸ್ವನಿರ್ಧಾರಿತ ಲಿಂಗ ಅಸ್ಮಿತೆಯ ಅಭಿವ್ಯಕ್ತಿಯನ್ನಾಧರಿಸಿ ವ್ಯಕ್ತಿಗಳಿಗೆ ಬದ್ಧತೆಯ ಪ್ರೀತಿಯ ಸಂಬಂಧವನ್ನು, ಮದುವೆಯ ಸಂಬಂಧವನ್ನು ಮಾಡಿಕೊಳ್ಳಲು ನಿರಾಕರಿಸುವಂತಿಲ್ಲ.

**ಗರ್ಭಧಾರಣೆ, ಮಗುವನ್ನು ಹೆರುವ ಅಥವಾ ದತ್ತು ತೆಗೆದುಕೊಳ್ಳುವ ಹಕ್ಕು; ಮಗುವಿನ ಪೋಷಣೆಯ ಮತ್ತು ಅಭಿರಕ್ಷಣೆಯ ಹಾಗೂ ತಂದೆ-ತಾಯಿಗಳಿಗೆ ಸಂಬಂಧಿಸಿದ ಸಾಮರ್ಥ್ಯವನ್ನು ಚಲಾಯಿಸುವ ಹಕ್ಕು**

ಸ್ವ-ನಿರ್ಧಾರಿತ ಲಿಂಗ ಅಸ್ಮಿತೆ ಮತ್ತು ಲೈಂಗಿಕ ಅಬಿವ್ಯಕ್ತಿಯ ಹಕ್ಕಿನೊಂದಿಗೆ ಪರಸ್ಪರ ಬದ್ಧತೆ ಮತ್ತು ಪ್ರೀತಿಯ ಸಂಬಂಧ ಮತ್ತು ಮದುವೆ ಒಪ್ಪಂದದ ಹಕ್ಕು ಇರುವಾಗ ಅದಕ್ಕೆ ತಕ್ಕನಾದ ಗರ್ಭಧಾರಣೆಯ ಮತ್ತು ಮಗುವನ್ನು ಹೆರುವ ಹಾಗೂ ದತ್ತು ತೆಗೆದುಕೊಳ್ಳುವ,

ಮಕ್ಕಳನ್ನು ಪೋಷಿಸುವ, ಜನ್ಮ ನೀಡಿದ ಅಥವಾ ದತ್ತು ತೆಗೆದುಕೊಂಡ ಮಗುವಿನ ಅಭಿರಕ್ಷಣೆಯ ಹಾಗು ತಂದೆ-ತಾಯಿಗಳಿಗೆ ಸಂಬಂಧಿಸಿದ ಸಾಮರ್ಥ್ಯವನ್ನು ಚಲಾಯಿಸುವ ಹಕ್ಕು ವ್ಯಕ್ತಿಗಳಿಗಿದೆ. ಇಲ್ಲಿ ವರ್ಣತಂತು, ಜನನೇಂದ್ರಿಯ, ಜನನ ಸಂದರ್ಭವನ್ನಾಧರಿಸಿದ ಲಿಂಗ ಅಥವಾ ಪ್ರಾರಂಭದ ಲಿಂಗಾಧಾರಿತ ಪಾತ್ರ ಅಥವಾ ಸ್ವ-ನಿರ್ಧಾರಿತ ಲಿಂಗ ಅಸ್ಮಿತೆ ಅಥವಾ ಅದರ ಅಭಿವ್ಯಕ್ತಿ ಆಧರಿಸಿ ಮೇಲಿನ ಹಕ್ಕನ್ನು ನಿರಾಕರಿಸುವಂತಿಲ್ಲ.

ಅದ್ದರಿಂದ ತಮ್ಮ ಅಥವಾ ತಮ್ಮ ಸಂಗಾತಿಯ ಅಥವಾ ಅವರ ಮಕ್ಕಳ ವರ್ಣತಂತು, ಜನನೇಂದ್ರಿಯ, ಜನನ ಸಂದರ್ಭದ ಲಿಂಗ, ಪ್ರಾರಂಭದ ಲಿಂಗಾಧಾರಿತ ಪಾತ್ರ ಅಥವಾ ಸ್ವನಿರ್ಧಾರಿತ ಲಿಂಗ ಅಸ್ಮಿತೆ ಅಥವಾ ಅದರ ಅಭಿವ್ಯಕ್ತಿಯನ್ನು ಆಧರಿಸಿ, ವ್ಯಕ್ತಿಗಳಿಗೆ ಗರ್ಭಧಾರಣೆಯ, ಮಗುವನ್ನು ಹೆರುವ ಅಥವಾ ದತ್ತು ತೆಗೆದುಕೊಳ್ಳುವ, ಪೋಷಿಸುವ, ಮಕ್ಕಳ ಅಭಿರಕ್ಷಣೆಯನ್ನು ಪಡೆಯುವ, ತಂದೆ ತಾಯಿಗಳ ಸಾಮರ್ಥ್ಯವನ್ನು ಚಲಾಯಿಸುವ ಹಕ್ಕನ್ನು ನಿರಾಕರಿಸಕೂಡದು.

# ಲಿಂಗ ಮರುನಿರ್ಮಾಣ ಶಸ್ತ್ರ ಚಿಕಿತ್ಸೆ

## (Sexual Reassignment Surgery - SRS)

ಮೊದಲ ಹಂತ : ರೋಗಿಗಳಿಗೆ ಸಂಬಂಧಪಟ್ಟ ವರ್ತನೆಗಳನ್ನು ಅಭ್ಯಸಿಸುವ ವಿಜ್ಞಾನಿಗಳು SRS ಅರ್ಜಿದಾರನ ಕುರಿತ ಮಾಹಿತಿ ಸಂಗ್ರಹಿಸುತ್ತಾರೆ. ಇದರ ಉದ್ದೇಶವೇನೆಂದರೆ ಟ್ರಾನ್ಸ್‌ಸೆಕ್ಷುವೆಲ್‌ಗಳ ಮತ್ತು ಇತರೆ ಲಿಂಗ ಅಸ್ವಸ್ಥತೆಯ ವಿಧಾನಗಳ ನಡುವಿನ ವ್ಯತ್ಯಾಸ ಗುರುತಿಸುವುದು. ಇದನ್ನು ಮಾಡಲು ಅರ್ಜಿದಾರನ ಸಾಮಾನ್ಯ ಮತ್ತು ಲಿಂಗ ಬೆಳವಣಿಗೆ ಕುರಿತು ಸಂದರ್ಶನ ನಡೆಸುತ್ತಾರೆ. ಸಂದರ್ಶನವು ತಂದೆ-ತಾಯಿಗಳು ಮಕ್ಕಳ ಲಿಂಗ-ಅಸ್ವಸ್ಥತೆಯೊಂದಿಗೆ ಹೇಗೆ ವ್ಯವಹರಿಸಿದ್ದಾರೆ, ಪೋಷಕರ ಕುಟುಂಬದ ಹಿನ್ನೆಲೆ, ಗುರುತಿಸಿಕೊಳ್ಳುವ ಪ್ರತಿಮೆ (ಸಂಕೇತ) (identification figure), ಒಂದೇ ಲಿಂಗದವರೊಂದಿಗಿನ ಸಂಬಂಧ ಮತ್ತು ವಿರುದ್ಧ ಲಿಂಗದ ಪೋಷಕರು, ಮೊದಲ ಪ್ರಜ್ಞಾಪೂರ್ವಕ ಬೇರೆ ಲಿಂಗದ ಭಾವನೆಗಳು, ಲೈಂಗಿಕತೆ ಅಂಶಗಳು, ಇತ್ಯಾದಿಯನ್ನು ಒಳಗೊಂಡಿದೆ. ಅರ್ಜಿದಾರರು ಟ್ರಾನ್ಸ್‌ಸೆಕ್ಷುವಲ್‌ಗಳ ಲಕ್ಷಣಗಳನ್ನು ದೃಢಪಡಿಸಬೇಕು. ಹಾರ್ಮೋನ್ ಚಿಕಿತ್ಸೆಯ ಮೌಲ್ಯಮಾಪನಕ್ಕಾಗಿ ಕನಿಷ್ಠ ಮೂರು ತಿಂಗಳ ಮನೋಚಿಕಿತ್ಸೆಯನ್ನು ಪೂರೈಸಿರಬೇಕು. ಈ ಸಮಯದಲ್ಲಿ ಪುರುಷನಿಂದ ಸ್ತ್ರೀಯಾಗಲು ಬಯಸುವ ಟ್ರಾನ್ಸೆಕ್ಷುವಲ್ ರೋಗಿಯು ಮುಖದ ಮೇಲಿನ ಬೇಡದ ಕೂದಲುಗಳನ್ನು ತೆಗೆಯಲು ಬಯಸಿದಲ್ಲಿ ಎಲೆಕ್ಟ್ರಾಲಿಸಿಸ್ ಪ್ರಾರಂಭಿಸಬಹುದು.

ಎರಡನೆ ಹಂತ : ಹಾರ್ಮೋನ್ ಚಿಕಿತ್ಸೆಯ ಬರಹರೂಪದ ಮೌಲ್ಯಮಾಪನವನ್ನು ಪಡೆದ ನಂತರ ಅದರ ಪ್ರತಿಯನ್ನು ಅರ್ಜಿದಾರರು ಎಂಡೊಕ್ರಿನಾಲಜಿಸ್ಟ್‌ಗೆ ನೀಡಬೇಕು. ಅವರು ಸೂಕ್ತವಾದ ರಕ್ತ ರಾಸಯನಿಕಗಳ ನಿಗಾವಹಿಸುತ್ತಾರೆ ಮತ್ತು ನಿಯಮಿತವಾಗಿ ದೈಹಿಕ ಪರೀಕ್ಷೆಗಳನ್ನು ಮಾಡುತ್ತಾರೆ. ಇದು ಬಹಳ ಮುಖ್ಯವಾದುದು, ಕಾರಣ ಹಾರ್ಮೋನ್ ಚಿಕಿತ್ಸೆಯಿಂದ ಸರಿಪಡಿಸಲಾಗದ ಪರಿಣಾಮಗಳಾಗಬಹುದು ಮತ್ತು ಸಾಧು ಅಥವಾ ಗಂಭೀರವಾದ ಆರೋಗ್ಯ ಸಮಸ್ಯೆಗಳಿಗೆ ಕಾರಣವಾಗಬಹುದು. ರೋಗಿಯು ತಜ್ಞ ವೈದ್ಯರು ಹೇಳುವುದನ್ನು ಅನುಸರಿಸಿದರೆ ತೊಂದರೆಗೊಳಗಾಗುವುದು ಕಡಿಮೆಯಾಗುತ್ತದೆ. ತಜ್ಞ ವೈದ್ಯರು ಹಾರ್ಮೋನ್ನುಗಳಿಂದ ರೋಗಿ ನಿರೀಕ್ಷಿಸುವುದೇನು, ಅದರ ನಕಾರಾತ್ಮಕ, ಸಕಾರಾತ್ಮಕ ಪರಿಣಾಮಗಳೇನೆಂದು ವಿವರಿಸುತ್ತಾರೆ ಮತ್ತು ರೋಗಿಯ ಪ್ರಯೋಗಶಾಲೆ ಕೆಲಸದ ಮೇಲೆ ನಿಗಾವಹಿಸುತ್ತಾರೆ. ಪುರುಷನಿಂದ ಸ್ತ್ರೀಯಾಗಬಯುಸುವ ರೋಗಿಯು ದಾಡಿಯನ್ನು ತೆಗೆಯುವ ಎಲೆಕ್ಟ್ರಾಸಿಸ್‌ನನ್ನು ಪ್ರಾರಂಭಿಸಿಲ್ಲದಿದ್ದರೆ, ಹಾರ್ಮೋನ್ ಚಿಕಿತ್ಸೆಯ ಪ್ರಾರಂಭದ ಹಂತಗಳಲ್ಲಿ ಪ್ರಾರಂಭಿಸಬೇಕು.

ಮೂರನೆ ಹಂತ : ಈ ಹಂತ 1 ವರ್ಷದಿಂದ 2 ವರ್ಷಗಳದ್ದಾಗಿದ್ದು

ರೋಗಿಯು ತಾನು ಆಯ್ಕೆ ಮಾಡಿಕೊಳ್ಳಬೇಕಾದ ಲಿಂಗದವರಂತೆ ಜೀವಿಸುತ್ತಾನೆ. ಈ ಹಂತದಲ್ಲಿ ರೋಗಿಯು ಹಾರ್ಮೋನ್ ಚಿಕಿತ್ಸೆಯನ್ನು ಮುಂದುವರೆಸುತ್ತಿರುತ್ತಾನೆ.

ರೋಗಿಯು ಲಿಂಗ ಆಯ್ಕೆಯಲ್ಲಿ 24 ಗಂಟೆಗಳೂ ಜೀವಿಸುತ್ತಾನೆ. ಹಾಗಾಗಿ ಈ ಅವಧಿಯನ್ನು "ನಿಜವಾದ ಪರೀಕ್ಷೆಯ ಕಾಲ"ವೆಂದು ಕರೆಯಲಾಗುತ್ತದೆ. ಈ ಸಮಯದಲ್ಲಿ ರೋಗಿಯು ದೃಢತೆಯನ್ನು ಪ್ರದರ್ಶಿಸಬೇಕು ಮತ್ತು ಕಾರ್ಯನಿರ್ವಹಣೆಯ ಸಾಮರ್ಥ್ಯವನ್ನು ಸಾಬೀತುಪಡಿಸಬೇಕು, ತನಗೆ ತಾನು ಆಧಾರವಾಗಬೇಕು ಮತ್ತು ಸಾಮಾಜಿಕವಾಗಿ ಕ್ರಿಯಾಶೀಲರಾಗಿರಬೇಕು. ಹಾರ್ಮೋನ್ ಚಿಕಿತ್ಸೆಯನ್ನು ಭಾಗಶಃವಾಗಿ ಪ್ರಾರಂಭಿಸಬೇಕು. ಇದು ಬದಲಾಗಲಾರದಂತೆ ಲೈಂಗಿಕ ಸ್ಟಿರಾಯ್ಡುಗಳನ್ನು ತಡೆಯುತ್ತದೆ. ಪುರುಷನಿಂದ ಸ್ತ್ರೀಯಾಗುವ ದೇಹವು ಗಂಡಸುತನವನ್ನು ಮುಂದೆಂದೂ ಪಡೆಯುವುದಿಲ್ಲ. ಸ್ತ್ರೀಯಿಂದ ಪುರುಷರಾಗುವವರಲ್ಲಿ ಮುಟ್ಟು ನಿಂತುಹೋಗುತ್ತದೆ, ಕೆಲವು ವೇಳೆ ಸ್ತನದ ಜೀವಕೋಶಗಳು ದುರ್ಬಲವಾಗುವುದರ ಅನುಭವವಾಗುವುದು. ಇದಕ್ಕೆ ವಿರುದ್ಧವಾಗಿ ಸಂಪೂರ್ಣ ಹಾರ್ಮೋನ್ ಚಿಕಿತ್ಸೆಯನ್ನು ಹಿಂತೆಗೆಯಲು ಸಾಧ್ಯವಿಲ್ಲ. ಅದು ಹೆಣ್ಣಿನ ದೇಹಕ್ಕೆ ಪುರುಷತನವನ್ನು ಪುರುಷನ ದೇಹಕ್ಕೆ ಹೆಣ್ಣುತನವನ್ನು ನೀಡುತ್ತದೆ. ಇದನ್ನು 18 ವಯಸ್ಸಿನೊಳಗೆ ನೀಡಲಾಗುತ್ತದೆ. ಪರೀಕ್ಷೆಯ ಕಾಲದ ಕನಿಷ್ಠ ಅವಧಿ ಸ್ತ್ರೀಯಿಂದ ಪುರುಷರಾಗುವವರಿಗೆ 1 ವರ್ಷ, ಪುರುಷನಿಂದ ಸ್ತ್ರೀಯಾಗುವವರಿಗೆ 1.5 ವರ್ಷಗಳು. ಈ ವ್ಯತ್ಯಾಸವೇಕೆಂದರೆ ಲಿಂಗ ಪಾತ್ರ ಬದಲಾವಣೆಯ ಪರಿಣಾಮ ಸ್ತ್ರೀಯಿಂದ ಪುರುಷರಾಗುವವರಿಗಿಂತ ಪುರುಷರಿಂದ ಸ್ತ್ರೀಯಾಗುವವರ ಮೇಲೆ ಹೆಚ್ಚಿರುತ್ತದೆ, ಪುರುಷರಿಂದ ಸ್ತ್ರೀಯಾಗುವವರಿಗೆ ಹೊಸ ಪರಿಸ್ಥಿತಿಗೆ ಹೊಂದಿಕೊಳ್ಳಲು ಹೆಚ್ಚಿನ ಕಾಲ ಬೇಕಾಗುತ್ತದೆ.

ನಾಲ್ಕನೆ ಹಂತ : ಅಯ್ಕೆ ಮಾಡಿಕೊಳ್ಳಬೇಕಾದ ಲಿಂಗದವರಂತೆ ಜೀವಿಸಬೇಕಾದ ಅವಧಿಯ ಕೊನೆಯಲ್ಲಿ ಪುರುಷರಿಂದ ಮಹಿಳೆಯರಾಗುವ ಟ್ರಾನ್ಸ್‌ಸೆಕ್ಷುವಲ್‌ಗಳಿಗೆ ಆರ್ಕಿಡೆಕ್ಟಮಿ (ಗಂಡಸಿನ ಲೈಂಗಿಕ ಗ್ರಂಥಿಗಳನ್ನು ತೆಗೆಯಲು)ಯನ್ನು ಮಾಡಬೇಕಾಗುತ್ತದೆ. ನೆಡುವ ಅಥವಾ ಸ್ತನಗಳನ್ನು ವೃದ್ಧಿಸುವ ಮತ್ತು ಬಯಸದಲ್ಲಿ ಜನನೇಂದ್ರಿಯ ಹೊರತುಪಡಿಸಿದ ಲಿಂಗ ಮರುನಿರ್ಮಾಣದ ಶಸ್ತ್ರಚಿಕಿತ್ಸೆಯ ಪ್ರಕ್ರಿಯೆಗಳನ್ನು ಈ ಸಮಯದಲ್ಲಿ ಮಾಡಲಾಗುತ್ತದೆ. ಆಯ್ಕೆ ಮಾಡಿಕೊಳ್ಳಬೇಕಾದ ಲಿಂಗದವರಂತೆ ಒಂದು ವರ್ಷ ಜೀವಿಸಿದ ನಂತರ ಮಹಿಳೆಯರಿಂದ ಪುರುಷರಾಗುವ ಟ್ರಾನ್ಸ್‌ಸೆಕ್ಷುವಲ್‌ಗಳಿಗೆ ಮಸ್ಟೆಕ್ಟಮಿ(ಸ್ತನಗಳನ್ನು ತೆಗೆಯಲು) ಮತ್ತು ಹಿಸ್ಟ್ರೆಕ್ಟಮಿ(ಗರ್ಭಕೋಶವನ್ನು ತೆಗೆಯಲು)ಯನ್ನು ಮಾಡಲಾಗುತ್ತದೆ. ಬಹುಪಾಲು ರೋಗಿಗಳು ಮಸ್ಟೈಕ್ಟಮಿಗಾಗಿ ಪ್ಲಾಸ್ಟಿಕ್ ಸರ್ಜನ್‌ರನ್ನು ಹಿಸ್ಟ್ರೆಕ್ಟಮಿಗಾಗಿ ಸ್ತ್ರೀರೋಗ ತಜ್ಞರನ್ನು ಸಂದರ್ಶಿಸುತ್ತಾರೆ. ಮಹಿಳೆಯಿಂದ ಪುರುಷನಾಗುವ ಟ್ರಾನ್ಸ್‌ಸೆಕ್ಷುವಲ್‌ಗಳು ಫ್ಯಾಲೊಪ್ಲಾಸ್ಟಿ (ಮಹಿಳೆಗೆ ಪುರುಷ ಲೈಂಗಿಕ ಅಂಗನೆಡಲು) ಮಾಡುವ ಶಸ್ತ್ರಚಿಕಿತ್ಸಾ ತಜ್ಞರೊಂದಿಗೆ ಸಂಪೂರ್ಣ ಸಹಮತ ಹೊಂದಿರಬೇಕು. ಕೆಲಸಮಯ ಆಂಡ್ರೋಜೆನ್ ತೆಗೆದು ಕೊಂಡ ಕೆಲವು ಮಹಿಳೆಯಿಂದ ಪುರುಷನಾಗುವ ಟ್ರಾನ್ಸ್‌ಸೆಕ್ಷುವಲ್‌ಗಳು ಚಂದ್ರನಾಡಿಯು ತುಂಬಾ ದೊಡ್ಡದಾಗುವುದರಿಂದ ಫ್ಯಾಲೊ ಪ್ಲಾಸ್ಟಿಯನ್ನು ಮಾಡಿಸಿಕೊಳ್ಳಲು ಹೋಗುವುದಿಲ್ಲ.

ಐದನೇ ಹಂತ : ಈ ಹಂತದಲ್ಲಿ, ಶಸ್ತ್ರಚಿಕಿತ್ಸೆಯ ಮೊದಲು ಅಂತಿಮ ಮಾನಸಿಕ ಮೌಲ್ಯಮಾಪನವನ್ನು ನಿರ್ಧರಿಸಬೇಕು. ಕನಿಷ್ಠ ಪಕ್ಷ ಇಬ್ಬರು, ವರ್ತನಾ ಚಿಕಿತ್ಸಾ ವಿಜ್ಞಾನಿಗಳು ಬರವಣಿಗೆಯಲ್ಲಿ ಎರಡು ಮೌಲ್ಯಮಾಪನಗಳನ್ನು ನೀಡಬೇಕು. ಅವರಲ್ಲಿ ಒಬ್ಬರು ಡಾಕ್ಟರೇಟ್ ಹಂತದವರಾಗಿರಬೇಕು ಮತ್ತು ಅವರು ಶಸ್ತ್ರಚಿಕಿತ್ಸೆಗೆ ಮೊದಲು ರೋಗಿಯೊಂದಿಗೆ ಕನಿಷ್ಠ

ಆರುತಿಂಗಳ ವೃತ್ತಿಸಂಬಂಧಿ ಸಂಬಂಧವನ್ನಿರಿಸಿಕೊಂಡಿರಬೇಕು.

ಆರನೆ ಹಂತ : ಶಸ್ತ್ರ ಚಿಕಿತ್ಸೆ.

ಏಳನೆಯ ಹಂತ : ಎಸ್.ಆರ್.ಎಸ್. ಮುಗಿದ ನಂತರ ಕನಿಷ್ಠ ಪಕ್ಷ ಮೂರು ತಿಂಗಳವರೆಗೆ ಶಸ್ತ್ರಚಿಕಿತ್ಸಾ ನಂತರದ ಆರೈಕೆಯ ಹಾಗು ಫಾಲೊಅಪ್‌ನ ಅಗತ್ಯವಿದೆ. ಇದಕ್ಕಾಗಿ ಆರು ತಿಂಗಳ ಅವಧಿಯನ್ನು ಶಿಫಾರಸ್ಸು ಮಾಡುತ್ತಾರೆ. ಈ ಚೇತರಿಸಿಕೊಳ್ಳುವ ಅವಧಿಯು ತಕ್ಷಣದ ಮಾನಸಿಕ ಮತ್ತು ಸಾಮಾಜಿಕ ಹೊಂದಣಿಕೆಗೆ ಅಗತ್ಯ.

(ಮಾಹಿತಿ ಮೂಲ : www.umkc.edu/sites/hsw/gendid/srs.html)

# 'ವಿವಿಧ'ದವರ ಕರಪತ್ರ : ಲೈಂಗಿಕತೆ ಅಲ್ಪಸಂಖ್ಯಾತರ ಹಕ್ಕುಗಳು ಮಾನವ ಹಕ್ಕುಗಳು

ಲೈಂಗಿಕತೆ ಅಲ್ಪಸಂಖ್ಯಾತರು (ಹಿಜ್ರಾಗಳು, ಕೋಥಿಗಳು, ಡಬ್ಬಲ್‌ಡೆಕ್ಕರ್‌ಗಳು ದ್ವಿಲಿಂಗಕಾಮಿಗಳು, ಸಲಿಂಗಕಾಮಿಗಳು, ಲೆಸ್ಬಿಯನ್‌ಗಳು, ಗೇಗಳು ಲಿಂಗಬದಲಾಯಿಸಿಕೊಂಡವರು ಮತ್ತು ತಮ್ಮ ಲಿಂಗ ಹಾಗೂ ಲೈಂಗಿಕತೆಯ ಕಾರಣಕ್ಕಾಗಿ ಶೋಷಣೆಗೊಳಗಾದರು) ಮತ್ತವರ ಬೆಂಬಲಿಗರನ್ನೊಳಗೊಂ 'ವಿವಿಧ' ಒಂದು ಸ್ವಾಯತ್ತ ಗುಂಪು. ಯಾವುದೇ ಹಣಕಾಸಿನ ನೆರವಿಲ್ಲದೆ ಈ ಗುಂಪು ಹತ್ತು ತಿಂಗಳಿಂದ ಕಾರ್ಯನಿರತವಾಗಿದೆ. ವಿವಿಧ ಒಂದು ಸಮುದಾಯ ಧ್ವನಿಯಾಗಿ ಮೊದಲ ಬಾರಿಗೆ ಸಾಮಾಜಿಕವಾಗಿ ಹೊರ ಅಡಿ ಇಡುತ್ತಿದೆ.

ಪ್ರತೀ ವರ್ಷ ಪ್ರಪಂಚದಾದ್ಯಂತ ಡಿಸೆಂಬರ್ 10ರಂದು ಮಾನವ ಹಕ್ಕುಗ ದಿನವಾಗಿ ಆಚರಿಸಲಾಗುತ್ತದೆ. ವರ್ಗ, ಜಾತಿ, ಲಿಂಗ, ಲೈಂಗಿಕತೆ, ಜನಾಂಗ, ಭಾ ರಾಷ್ಟ್ರೀಯತೆ, ಪಂಗಡ, ಅಥವಾ ರಾಜಕೀಯ ನಂಬಿಕೆಗಳ ಬೇಧಭಾವವಿಲ್ಲದೆ ಎಲ್ಲ ಮಾನವ ಹಕ್ಕುಗಳನ್ನು ರಕ್ಷಿಸಲಾಗಿದ್ದರೂ ಸಹ, ಲೈಂಗಿಕತೆ ಅಲ್ಪಸಂಖ್ಯಾತರ ಮಾನ ಹಕ್ಕುಗಳನ್ನು ಭಾರತದೆಲ್ಲೆಡೆ ಉಲ್ಲಂಘಿಸಲಾಗುತ್ತಿದೆ. ಹಾಗಾಗಿ ಬಲವಂತವಾಗಿ ನಾ ಹೀನಾಯ ಬದುಕಿಗೆ ತಳ್ಳಲ್ಪಟ್ಟಿದ್ದೇವೆ.

ಭಾರತೀಯ ದಂಡ ಸಂಹಿತೆಯ ಸೆಕ್ಷನ್ 377, ಒಂದೇ ಲಿಂಗದ ಇಬ್ಬ ನಡುವಿನ ಲೈಂಗಿಕ ಸಂಪರ್ಕವನ್ನು ಅಪರಾಧವೆಂದು ಪರಿಗಣಿಸುತ್ತದೆ. ಈ ಕಾನೂನನ್ನು ಬ್ರಿಟೀಷರು 1860ರಲ್ಲಿ ಭಾರತದಲ್ಲಿ ಜಾರಿಗೆ ತಂದರು. ಬಹಳ ಹಿಂ ಬ್ರಿಟನ್‌ನಲ್ಲೇ ಈ ಕಾನೂನನ್ನು ತೆಗೆದುಹಾಕಲಾಗಿದೆ. ಆದರೆ ಭಾರತದಲ್ಲಿ ಆ ಕುಖ್ಯಾ ವಸಾಹತುಶಾಹಿ ಪರಂಪರೆ ಇನ್ನೂ ಮುಂದುವರೆದಿದೆ. ಈ ಕಾನೂನನ ಬಳಸಿಕೊಂಡು ಸಲಿಂಗ, ದ್ವಿಲಿಂಗ ಕಾಮಿಗಳು, ಡಬ್ಬಲ್‌ಡೆಕ್ಕರ್‌ಗಳು, ಕೋಥಿಗ ಹಾಗೂ ಹಿಜ್ರಾಗಳನ್ನು ಸಾರ್ವಜನಿಕ ಸ್ಥಳಗಳಲ್ಲಿ, ಉದ್ಯಾನವನಗಳಲ್ಲಿ ಕಿರುಕು ನೀಡುತ್ತಾರೆ. ಅವರಿಂದ ಹಣ ಕಿತ್ತುಕೊಳ್ಳುವುದು, ಬೆದರಿಸುವುದು, ಹೊಡೆಯುವುದ ಲೈಂಗಿಕವಾಗಿ, ದೈಹಿಕವಾಗಿ ಹಿಂಸಿಸುವುದು ಸಾಮಾನ್ಯ. ಹಲವಾರು ಗೂಂಡಾಗ ಇವರ ಪರಿಸ್ಥಿತಿಯ ಲಾಭ ಪಡೆದುಕೊಂಡು ಸಾರ್ವಜನಿಕ ಸ್ಥಳಗಳಲ್ಲಿ ಇವರನ ಹಿಂಸಿಸಿ, ಹೊಡೆದು ಹಣ ಕಿತ್ತುಕೊಳ್ಳುತ್ತಾರೆ. ಲೆಸ್ಬಿಯನ್ ಜೋಡಿಗಳನ್ನು ಬೇ ಮಾಡಲು ಸೆಕ್ಷನ್ 377ನ್ನು ಬಳಸಲಾಗುತ್ತದೆ.

ಮದುವೆ, ದತ್ತು, ಉತ್ತರಾಧಿಕಾರತ್ವ, ಆಸ್ತಿ, ಜೀವವಿಮೆ, ಪಿಂಚಣಿ, ಗ್ರಾಚ್ಯು ವಸತಿ ಇತ್ಯಾದಿಗೆ ಸಂಬಂಧಪಟ್ಟಂತೆ ಇರುವ ಕಾನೂನುಗಳು ಪರಲಿಂ ಮದುವೆಗಳನ್ನು ಮಾತ್ರ ನ್ಯಾಯಬದ್ಧಗೊಳಿಸುವುದರಿಂದ ಲೈಂಗಿಕ ಅಲ್ಪಸಂಖ್ಯಾತರ ಹಕ್ಕುಗಳನ್ನು ಗುರುತಿಸುವುದಿಲ್ಲ. ಭಾರತದ ಸಂವಿಧಾನವು ಗಂಡು ಹೆಣ್ಣು ಎಂಬ ಎರಡೇ ಲಿಂಗಗಳನ್ನು ಗುರುತಿಸುತ್ತದೆ. ಹಿಜ್ರಾಗಳಿಗೆ ಸಂವಿಧಾನದ ಸ್ಥಾನವೇ ಇಲ್ಲ. ಲಿಂಗ ಬದಲಾವಣೆಯಾದವರ ಲಿಂಗವನ್ನು ಗುರುತಿಸ

ಇರುವುದರಿಂದ ಹಿಜ್ರಾಗಳಿಗೆ ಮದುವೆ ಹಕ್ಕು, ರೇಷನ್ ಕಾರ್ಡ್ ಸೌಲಭ್ಯ/ ಪಾಸ್ ಪೋರ್ಟ್/ ಮತ ಚಲಾವಣೆಯ ಹಕ್ಕುಗಳು ಸಿಗುವುದೇ ಇಲ್ಲ. ಬಹಳಷ್ಟು ಕೋಥಿಗಳು ತಾವು ಕೆಲಸ ಮಾಡುವ ಸ್ಥಳಗಳಲ್ಲಿ ಪುರುಷ ಸಹೋದ್ಯೋಗಿಗಳಿಂದ ಲೈಂಗಿಕ ಕಿರುಕುಳ ಅನುಭವಿಸುತ್ತಾರೆ. ಹೆಚ್ಚಿನ ಆಯ್ಕೆಗಳಿಲ್ಲದ ಕಾರಣ ಬಹಳಷ್ಟು ಕೋಥಿಗಳು, ಹಿಜ್ರಾಗಳು ಜೀವನಕ್ಕಾಗಿ ಲೈಂಗಿಕ ವೃತ್ತಿಗಿಳಿಯುತಾರೆ. ಲೈಂಗಿಕ ವೃತ್ತಿಯಲ್ಲಿರುವವರ (ಹಿಜ್ರಾಗಳು, ಕೋಥಿಗಳು, ಮಹಿಳೆಯರು, ಪುರುಷರು– ಜೀವನ ನರಕವಾಗಿದೆ. ಐ.ಟಿ.ಪಿ.ಎ (ಇಮ್ಮಾರಲ್ ಟ್ರಾಫಿಕಿಂಗ್ ಪ್ರಿವೆನ್‌ಷನ್ ಆಕ್ಟ್) ಕಾಯ್ದೆಯು ಲೈಂಗಿಕ ವೃತ್ತಿಯನ್ನು ಅಪರಾಧವೆಂದು ಪರಿಗಣಿಸುತ್ತದೆ. ಈ ಕಾಯ್ದೆಯು ಪೋಲಿಸರಿಗೆ ಅಪಾರ ಅಧಿಕಾರವನ್ನು ನೀಡುವುದರಿಂದ ಅವರು ಲೈಂಗಿಕ ವೃತ್ತಿಯಲ್ಲಿರುವವರನ್ನು ಹಿಂಸಿಸಿಸುವುದು ಕಿರುಕುಳ ನೀಡುವುದು ಅತ್ಯಾಚಾರವೆಸಗುವುದು, ಹೊಡೆದು ಬೈಯ್ದು ಹಣ ಕೀಳುವುದು ಸಾಮಾನ್ಯವಾಗಿದೆ.

ಲೈಂಗಿಕತೆ ಅಲ್ಪಸಂಖ್ಯಾತರು ದೈಹಿಕ ಹಿಂಸೆ, ಬೈಗುಳ, ಬೆದರಿಕೆಗೆ ನಿರಂತರವಾಗಿ ಒಳಗಾಗುತ್ತಾರೆ. ಅಲ್ಲದೆ ಮನೆಯವರು ಅವರನ್ನು ಹೊರಹಾಕುತ್ತಾರೆ. ಬಹಳಷ್ಟು ಜನರು ಮನೆಯಿಂದ ಹೊರಬಂದು ಆಸ್ತಿ ಹಕ್ಕಿನಿಂದ ವಂಚಿಸಲ್ಪಟ್ಟಿದ್ದಾರೆ. ಕೆಲವೊಮ್ಮೆ ಕುಟುಂಬದವರು ಬಲವಂತವಾಗಿ ಪರಲಿಂಗ ಮದುವೆಗೆ ತಳ್ಳುವುದರಿಂದ ಅವರ ಸಂಗಾತಿಗಳು, ಮಕ್ಕಳೂ ಸಹ ಶೋಷಣೆಗೆ ಒಳಪಡುತ್ತಾರೆ. ಕೆಲವು ಕುಟುಂಬಗಳು ತಮ್ಮ ಮಕ್ಕಳ ಲಿಂಗ/ ಲೈಂಗಿಕತೆ ಅಭಿವ್ಯಕ್ತಿಯನ್ನು ಸರಿಪಡಿಸಲು ಅವೈಜ್ಞಾನಿಕ ತಪ್ಪು ಮಾಹಿತಿಯ ಅನೀತಿಯ ಮನೋವೈಜ್ಞಾನಿಕ ಚಿಕಿತ್ಸೆಗೊಳಪಡಿಸುತ್ತಾರೆ. ಈ ಚಿಕಿತ್ಸೆಯು ಅಪಾಯಕಾರಿ ಔಷಧಿ, ಎಲೆಕ್ಟ್ರಿಕ್ ಶಾಕ್ ಮತ್ತು ಹೇವರಿಕೆಯನ್ನುಂಟುಮಾಡುವುದನ್ನು ಒಳಗೊಂಡಿದೆ. ಈ ಚಿಕಿತ್ಸೆಯಿಂದ ಅಪಾರ ತೊಂದರೆಯನ್ನು ಅನುಭವಿಸುವ ಅಲ್ಪಸಂಖ್ಯಾತರು ದೈಹಿಕವಾಗಿ–ಮಾನಸಿಕವಾಗಿ ಕುಸಿದುಹೋಗುತ್ತಾರೆ. ನಿಜವಾಗಿಯೂ ಬದಲಾಗಬೇಕಾಗಿರುವುದು ನಮ್ಮ ಲೈಂಗಿಕತೆ / ಲಿಂಗ ಅಲ್ಲ, ಲೈಂಗಿಕತೆ ಅಲ್ಪಸಂಖ್ಯಾತರನ್ನು ಕುರಿತ ಸಮಾಜದ ಅಜ್ಞಾನ, ಪೂರ್ವಾಗ್ರಹಗಳು, ಅಸಹಿಷ್ಣುತೆ. ನಮ್ಮ ಪುರುಷಪ್ರಧಾನ ಸಮಾಜ ವ್ಯವಸ್ಥೆಯಲ್ಲಿ ಲೆಸ್ಬಿಯನ್ ಮಹಿಳೆಯರು ಸಾರ್ವಜನಿಕ ಜಾಗ ಇಲ್ಲದಿರುವುದರಿಂದ ಇಮ್ಮಡಿಯ ತುಳಿತಕ್ಕೆ ಒಳಗಾಗುವರು. ಕುಟುಂಬಗಳು ಲೆಸ್ಬಿಯನ್ ಜೋಡಿಗಳನ್ನು ಬೇರೆ ಮಾಡುವುದಲ್ಲದೆ ಲೆಸ್ಬಿಯನ್/ ದ್ವಿಲಿಂಗ ಕಾಮಿ ಮಹಿಳೆಯರನ್ನು ಪರಲಿಂಗ ಮದುವೆಗೆ ಬಲವಂತವಾಗಿ ಒತ್ತಾಯಿಸುತ್ತಾರೆ. ಭಾರತದಲ್ಲಿ ಕಳೆದ ಐದು ವರ್ಷಗಳಲ್ಲಿ ೩೦ಕ್ಕೂ ಹೆಚ್ಚಿನ ಲೆಸ್ಬಿಯನ್ ಮಹಿಳೆಯರು ಆತ್ಮಹತ್ಯೆ ಮಾಡಿಕೊಂಡಿರುವುದು ದಾಖಲಾಗಿದೆ.

ಲೈಂಗಿಕತೆ ಅಲ್ಪಸಂಖ್ಯಾತರಿಗೆ ಬೀದಿಗಳಲ್ಲಿ, ಕೆಲಸ ಮಾಡುವ ಸ್ಥಳಗಳಲ್ಲಿ, ಶಾಲೆ/ ಕಾಲೇಜುಗಳಲ್ಲಿ, ಆಸ್ಪತ್ರೆ, ಇತರೆ ಸ್ಥಳಗಳಲ್ಲಿ ದೈಹಿಕ/ ಲೈಂಗಿಕ/ ಮೌಖಿಕ ಹಿಂಸೆ, ಅವಹೇಳನೆ ತಾರತಮ್ಯ ಸರ್ವಸಾಮಾನ್ಯ. ಭಾವನಾತ್ಮಕವಾಗಿ, ಸಾಮಾಜಿಕವಾಗಿ ಅನುಭವಿಸುವ ಒಂಟಿತನ ನಮ್ಮ ನಿತ್ಯ ದಿನಚರಿಯಾಗಿದೆ. ಸಮಾಜವು ನಮ್ಮಲ್ಲೇ ಅಪನಂಬಿಕೆ, ನಮ್ಮ ಬಗ್ಗೆ ನಾವೇ ಅವಮಾನ ಪಡುವಂತೆ, ಕೀಳರಿಮೆ, ಖಿನ್ನತೆ ಬೆಳೆಸಿಕೊಂಡು ಒಂಟಿಯಾಗಿ ಬದುಕುವಂತೆ ಮಾಡುತ್ತದೆ. ಬಲವಂತ ಆತ್ಮಹತ್ಯೆಯ ದಾರಿಗೂ ನಮ್ಮನ್ನು ಇದು ನೂಕುತ್ತದೆ.

ನಾವಿಂದು ಪರಲಿಂಗ - ಪಿತೃ ಪ್ರಧಾನ ಸಮಾಜದ ಮೂಕ ಬಲಿ ಪಶುಗಳಲ್ಲ. ನಾ ಒಗ್ಗಟ್ಟಾಗಿದ್ದೇವೆ. ಭಾರತದಾದ್ಯಂತ ಸಹಾಯವಾಣಿಗಳು, ಬೆಂಬಲ ಗುಂಪುಗಳ, ಆರೋಗ್ಯ ಕಾಳ ಮತ್ತು ನಮ್ಮ ಮಾನವ ಹಕ್ಕುಗಳ ರಕ್ಷಣೆಗಾಗಿ ಗುಂಪುಗಳನ್ನು ಪ್ರಾರಂಭಿಸಿದ್ದೇವೆ. ನಮ್ಮ ಬೆಂಬಲವನ ಇತರ ಜಾತಿ, ವರ್ಗ, ಲಿಂಗ, ಧರ್ಮ ಇತ್ಯಾದಿ ಹೆಸರಿನಲ್ಲಿ ತಾರತಮ್ಯಕ್ಕೊಳಗಾದವರಿಗ ವಿಸ್ತರಿಸಿದ್ದೇವೆ. ನಮ್ಮನ್ನು ನಾವು ಅಭಿವ್ಯಕ್ತಿಸಲು, ನಮ್ಮ ಹಕ್ಕುಗಳಿಗಾಗಿ ಹೋರಾಡಲು ಕಲಿತಿದ್ದೇ ನ್ಯಾಯ ಘನತೆ ಪಡೆಯುವವರೆಗೂ ನಮ್ಮ ಪಯಣ ನಿಲ್ಲದು.

ಲೈಂಗಿಕತೆ ಅಲ್ಪಸಂಖ್ಯಾತರನ್ನು ಹಿಂಸಿಸಬೇಡಿ. ಪ್ರೀತಿಯಿಂದ ಒಪ್ಪಿಕೊಳ್ಳಿ ಎಂದ ಕುಟುಂಬಗಳಿಗೆ ನಾವು ಮನವಿ ಮಾಡಿಕೊಳ್ಳುತ್ತೇವೆ. ನಾವು ಪ್ರಗತಿಪರ, ಜಾತ್ಯಾತೀತ ಗುಂಪುಗಳ ಮತ್ತು ಮಾಧ್ಯಮಗಳಿಗೆ ಕೇಳಿಕೊಳ್ಳುವುದೆಂದರೆ ನಿಮ್ಮ ಬೆಂಬಲವನ್ನು ಧರ್ಮ, ಜಾತಿ, ಜನಾಂ ಲಿಂಗ, ಅಂಗವಿಕಲತೆ, ಲೈಂಗಿಕತೆ ಮತ್ತಿತರೆ ವಿಷಯಗಳ ಮೇಲೆ ನಡೆಯುವ ದ್ವೇಷದ ವಿರು ಧ್ವನಿಗೂಡಿಸಿ ಎಂಬುದೇ ಆಗಿದೆ.







ಹಿಜ್ರಾ ಕೋಕಿಲಾ ಮೇಲೆ ನಡೆದ ದೌರ್ಜನ್ಯ ಮತ್ತು ಅತ್ಯಾಚಾರವನ ಜೂನ್ 2,2004ರಂದು ನಡೆದ ಪ್ರತಿಭಟನೆಯಲ್ಲಿನ ಫೋಟೋವ ಇಲ್ಲಿ ಬಳಸಲಾಗಿದೆ

